



# ಹೊಂಗನಸು



ಬಿ.ಎಂ.ಶ್ರೀ. ಪ್ರತಿಷ್ಠಾನದ ವಾರ್ತಾಪತ್ರ

**ಹೊಂಗನಸು – 86**

| ಸಂಪುಟ: ೧೦ ಸಂಚಿಕೆ: ೦೯ | ಜನವರಿ ೨೦೨೩ | ಪುಟಗಳು ೮ | ವಾರ್ಷಿಕ ಚಂದಾ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 10 Issue: 09 | JANUARY 2023 | Pages - 8 | A. Sub. - Rs. 20/- | Editor : Sri. B.R. Ravindranath |

ಶ್ರೀ ಶಕ ೧೯೪೫ ಶುಭಕೃತ ನಾಮ ಸಂವತ್ಸರ– ದಕ್ಷಿಣಾಯಣ– ಹೇಮಂತ್ ಋತು ಚಾಂದ್ರಮಾನ –ಪುಷ್ಯ – ಮಾಘ ಮಾಸ ಸೌರಮಾನ ತುಲಾ – ವೃಶ್ಚಿಕ



ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ಮೊಬೈಲ್ : ೯೭೨೮೧೨೧೨೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–30ಗಂಟೆ.
ವಾರದ ಎಲ್ಲ ದಿನಗಳಲ್ಲೂ ಕಚೇರಿ ಕಾರ್ಯ ನಿರ್ವಹಿಸುತ್ತದೆ.



**ಬಿ.ಎಂ.ಶ್ರೀ. ಪ್ರತಿಷ್ಠಾನದ ಸದಸ್ಯರು, ಹೊಂಗನಸು ಓದುಗರು ಹಾಗೂ ಎಲ್ಲಾ ಅಭಿಮಾನಿಗಳಿಗೂ 2023ರ ಹೊಸ ವರ್ಷದ ಶುಭಾಶಯಗಳು**

೨೫–೧೧–೨೨

## ತೀ.ನಂ.ಶ್ರೀ. ವಿಶೇಷ ಉಪನ್ಯಾಸ ದತ್ತಿ ಕಾರ್ಯಕ್ರಮ

### ವಿಷಯ : ತೀ.ನಂ.ಶ್ರೀ. ಅವರ ಲಲಿತ ಪ್ರಬಂಧಗಳು

**ಉಪನ್ಯಾಸಕರು : ಡಾ. ಪಿ.ನಂಜುಂಡ ಸಹ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು**




ತೀ.ನಂ.ಶ್ರೀ. ಅವರು ಕನ್ನಡದ ಮೂವರು ಶ್ರೀಕಾರ ದಿಗ್ಗಜರಲ್ಲಿ ಒಬ್ಬರು. ಬಿ.ಎಂ.ಶ್ರೀ. ಅವರು ಕನ್ನಡದ ಕಣ್ವರೆಂದೇ ಪ್ರಸಿದ್ಧರಾದವರು. ಎಂ.ಆರ್.ಶ್ರೀ. ಅವರು ಕನ್ನಡದ ಕಣ್ಮಣಿಗಳೆಂದು ಹೆಸರಾದವರು. ತೀ.ನಂ.ಶ್ರೀ. ಅವರು ಕನ್ನಡದ ಕಲಶವನ್ನು ಬೆಳಗಿ ಕೀರ್ತಿ ಗಳಿಸಿದವರು. ಶ್ರೀಮತಿ ಅಮೃತಾ ವಿ. ಅವರು ತೀ.ನಂ.ಶ್ರೀ. ಅವರ ಸಹೃದಯತೆ, ಕವಿಯಾಗಿ ರಸಭಾವವನ್ನು ಇಳಿಸುವ ಸೃಜನಶೀಲತೆ, ಶಿಷ್ಯವಾತ್ಸಲ್ಯ, ಮಾನವಾನುಕಂಪ ಹಾಗೂ ಕರ್ತವ್ಯ ನಿಷ್ಠೆಗಳನ್ನು ಗುರುತಿಸಿ ಪ್ರಭಾವಿತರಾದವರು. ತೀ.ನಂ.ಶ್ರೀ. ಶಿಷ್ಯರಿಗೆ ಅವಿಸ್ಮರಣೀಯವಾಗಿ ಸ್ಫೂರ್ತಿ ನೀಡುವಂತ ವ್ಯಕ್ತಿತ್ವ ಹೊಂದಿದ್ದವರು. ಅಮೃತಾ ಅವರು ತೀ.ನಂ.ಶ್ರೀ. ಅವರ ಹೆಸರಿನಲ್ಲಿ ಪ್ರತಿಷ್ಠಾನದಲ್ಲಿ ೨೦೧೪ರಲ್ಲಿ ಅವರಿಗೆ ಪ್ರಿಯವಾಗಿದ್ದ ಕ್ಷೇತ್ರವೊಂದಕ್ಕೆ ಸಂಬಂಧಿಸಿದಂತೆ ಉಪನ್ಯಾಸ ಏರ್ಪಡಿಸುವ ಸಲುವಾಗಿ ದತ್ತಿನಿಧಿಯೊಂದನ್ನು ಸ್ಥಾಪಿಸಿದ್ದಾರೆ. ಇದು ದತ್ತಿನಿಧಿಯ ಒಂಬತ್ತನೇ ವರ್ಷದ ಕಾರ್ಯಕ್ರಮವೆಂದು ಡಾ. ಶಾಂತರಾಜು ಅವರು, ದತ್ತಿದಾನಿಗಳ ಪರಿಚಯಮಾಡಿ, ಉಪನ್ಯಾಸಕ್ಕೆ ಆಗಮಿಸಿರುವ ಮತ್ತು ಜಾಲತಾಣದಲ್ಲಿ ವೀಕ್ಷಿಸುತ್ತಿರುವ ಸಾಹಿತ್ಯಾಸಕ್ತರನ್ನು ಸ್ವಾಗತಿಸಿದರು. ನಂತರ ಸಭೆಗೆ ಉಪನ್ಯಾಸಕರನ್ನು ಪರಿಚಯಿಸಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಆಚಾರ್ಯವರ್ಯರಾದ ಪ್ರೊ. ತೀ.ನಂ.ಶ್ರೀ.ಯವರ 'ಲಲಿತ ಪ್ರಬಂಧ'ಗಳ ಬಗ್ಗೆ ಉಪನ್ಯಾಸಕ್ಕೆ ಆಹ್ವಾನಿಸಿರುವುದು ತಮ್ಮ ಸುಯೋಗವೆಂದು ಭಾವಿಸಿ ಡಾ.ಪಿ. ನಂಜುಂಡ ಅವರು ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು. ಬಿ.ಎ. ಪದವಿಯಲ್ಲಿ ಆರು ಚಿನ್ನದ ಪದಕಗಳನ್ನು ಪಡೆದ ವಿದ್ಯಾರ್ಥಿ. ಇಂಗ್ಲಿಷ್ ಎಂ.ಎ.ಯಲ್ಲೂ ಪ್ರಥಮ ಸ್ಥಾನ ಗಳಿಸಿದರು. ಕನ್ನಡ ಎಂ.ಎ. ಪರೀಕ್ಷೆಯಲ್ಲೂ ಪ್ರಥಮ ಸ್ಥಾನ ಪಡೆದು, ಮೂರು ಸುವರ್ಣ ಪದಕಗಳನ್ನು ಪಡೆದರು. ಹೀಗೆ ತೀ.ನಂ.ಶ್ರೀ. ಅವರ ವಿದ್ಯಾಭ್ಯಾಸ ಮತ್ತು ವೃತ್ತಿಯ ಬಗ್ಗೆ ಮಾಹಿತಿ ನೀಡಿದರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನಕ್ಕೆ ಭದ್ರ ಬುನಾದಿಯನ್ನು ಹಾಕಿದವರಲ್ಲಿ ತೀ.ನಂ.ಶ್ರೀ. ಅವರೂ ಒಬ್ಬರು.

'ತೀ.ನಂ.ಶ್ರೀಕಂಠಯ್ಯ ಅವರ ಲಲಿತ ಪ್ರಬಂಧಗಳು' ಎಂಬ ವಿಷಯವನ್ನು ಕುರಿತು ಕಿರಿಯ ಪೀಳಿಗೆಯ ವಿದ್ವಾಂಸರಾದ ಡಾ.ಪಿ. ನಂಜುಂಡ ಅವರು ವಿಷಯವನ್ನು ತಲಸ್ಪರ್ಶಿಯಾಗಿ ಓದಿಕೊಂಡು ಟಿಪ್ಪಣಿ ಮಾಡಿಕೊಂಡು ವಿದ್ವತ್‌ಪೂರ್ಣ ಉಪನ್ಯಾಸ ಮಾಡಿದರು. ಆಚಾರ್ಯ ಕೃತಿಯಾದ ಭಾರತೀಯ ಕಾವ್ಯಮೀಮಾಂಸೆಯನ್ನು ಬರೆದು ಜನಮನ್ನಣೆಗೆ ಪಾತ್ರರಾಗಿ ಕಾವ್ಯ, ಪ್ರಬಂಧವೇ ಮೊದಲಾಗಿ ಸಾಹಿತ್ಯ ಕೃಷಿಮಾಡಿದ ತೀ.ನಂ.ಶ್ರೀ. ಅವರ ಪ್ರಬಂಧಗಳು ಶೇಕಡ ೪೦ ಗುರು ಸ್ಮರಣೆಗೆ ಮೀಸಲಾಗಿವೆ. ಟಿ.ಎಸ್. ವೆಂಕಣ್ಣಯ್ಯ, ಬಿ.ಎಂ.ಶ್ರೀ.ಅವರ ಸ್ಮರಣೆಯಲ್ಲಿ ಸಾಗಿದ ೧೭ ಪ್ರಬಂಧಗಳ ಗುಚ್ಛವನ್ನು 'ನಂಟರು' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದರು. ಲಾಲಿತ್ಯವೇ ಪ್ರದಾನವಾದ ಇವರ ಪ್ರಬಂಧಗಳಲ್ಲಿ ನಮ್ಮ ನಿಮ್ಮ ನಡುವಿನ ವರ್ತಮಾನದ ವಿಚಾರಗಳು ಬಹು ರಮ್ಯವಾಗಿ ಚಿತ್ರಿತವಾಗಿವೆ. ೧೦ ಪ್ರಬಂಧಗಳು ಮೈಸೂರು ವಿಶ್ವವಿದ್ಯಾನಿಲಯ ಮತ್ತು ಅಲ್ಲಿನ ಪ್ರಾಧ್ಯಾಪಕರ ಸುತ್ತಮುತ್ತಲಿನ ವಿಚಾರಗಳೇ ಆಗಿವೆ. 'ನಂಟರು', 'ನೆಗಡಿ' 'ಕಾಸಿನ ಸಂಘ' ಪ್ರಬಂಧಗಳು ಮತ್ತೆ ಮತ್ತೆ ನೆನಪಿಗೆ ಬರುತ್ತವೆ.

೩ ನೇ ಪುಟಕ್ಕೆ

ಸಂಪಾದಕೀಯ

ಸುಂಟರಗಾಳಿಯಂತೆ ೨೦೨೦ರ ಆದಿಯಲ್ಲಿ ಇಡೀ ಪ್ರಪಂಚವನ್ನೇ ಅತೀವವಾಗಿ ಕಾಡಿದ ಕರೋನಾ ಸಾಂಕ್ರಾಮಿಕದಿಂದ ಉಂಟಾದ ಸಾವು ನೋವುಗಳು, ಕಷ್ಟ ನಷ್ಟಗಳನ್ನು ಕೆಟ್ಟ ಕನಸು ಎಂಬಂತೆ ತಿಳಿದು ಯಥಾ ಪ್ರಕಾರ ಜೀವನ ನಡೆಸಲು ನಾವೆಲ್ಲರೂ ಅಣಿಯಾಗುತ್ತಿರುವಂತೆಯೇ, ಹೋದೆಯಾ ಪಿಶಾಚಿ ಎಂದರೆ ಬಂದೆ ಗವಾಕ್ಷಿಯಲ್ಲಿ ಎಂಬ ಪರಿಸ್ಥಿತಿ ಬಂದೊದಗಿದೆ.

೨೦೧೯ರ ಅಂತ್ಯದಲ್ಲಿ ಯಾವ ಚೀನಾ ದೇಶದ ವುಹಾನ್ ನಗರದಲ್ಲಿ ಪ್ರಾರಂಭವಾದ ಕರೋನಾ ವೈರಾಣುವಿನ ಈಗಿನ ರೂಪದ ವೈರಾಣು ಅದೇ ಚೀನಾದಲ್ಲಿ ಈಗ ೨೦೨೨ರ ಅಂತ್ಯದಲ್ಲಿ ಮತ್ತೊಮ್ಮೆ ತಲೆ ಎತ್ತಿ, ವಿಶ್ವಾದ್ಯಂತ ಮಿಲಿಯಾಂತರ ಜನಗಳನ್ನು ಕಾಡಲು ಪ್ರಾರಂಭ ಮಾಡಿದೆ. ಚೀನಾ, ಅಮೆರಿಕಾ, ಜಪಾನ್ ಇತ್ಯಾದಿ ದೇಶಗಳಲ್ಲಿ ಸೋಂಕಿನ ಪ್ರಮಾಣ ಹೆಚ್ಚಿನ ಮಟ್ಟದಲ್ಲಿರುವುದೆಂದು ವರದಿಗಳು ಬರತೊಡಗಿವೆ. ಒಂದು ಅಂದಾಜಿನ ಪ್ರಕಾರ ಚೀನಾದ ಶೇ. ೬೦ ರಷ್ಟು ಜನರು ಮತ್ತು ಇಡೀ ವಿಶ್ವದ ಶೇ. ೧೦ ರಷ್ಟು ಜನರಿಗೆ ಸೋಂಕು ಉಂಟಾಗಿ ಮಿಲಿಯಾಂತರ ಜನರು ಸಾವನ್ನಪ್ಪುವ ಸಾಧ್ಯತೆಗಳು ಇವೆ.

೨೦೨೦ ಹಾಗೂ ೨೦೨೧ರಲ್ಲಿ ಭಾರತದ ಜನತೆ ಅನುಭವಿಸಿದ ಕಷ್ಟ ನಷ್ಟಗಳನ್ನು ಬಹುತೇಕ ಜನರು ಮರೆತಿರಲಿಕ್ಕಿಲ್ಲ. ಲಕ್ಷಾಂತರ ಜನರ ಜೀವನಗಳೇ ಅಸ್ತವ್ಯಸ್ತಗೊಂಡು, ಆದಾಯ ಮಾರ್ಗಗಳು ಕಮರಿಹೋಗಿ ಲೆಕ್ಕವಿಲ್ಲದಷ್ಟು ಜನರು ನಿರುದ್ಯೋಗಿಗಳಾಗಿ ಕಡು ಬಡತನದತ್ತ ದೂಡಲ್ಪಟ್ಟಿರುತ್ತಾರೆ. ಲಕ್ಷಾಂತರ ಮಕ್ಕಳು ಅನಾಥರಾಗಿರುತ್ತಾರೆ.

ಹಾಗಿದ್ದರೂ, ಸರ್ವಾಧಿಕಾರಿ ಸರ್ಕಾರವಿರುವ ಚೀನಾ ದೇಶದ ಪರಿಸ್ಥಿತಿಗಿಂತ ಪ್ರಜಾಪ್ರಭುತ್ವದ ಸರ್ಕಾರವಿರುವ ನಮ್ಮ ಭಾರತದ ಪರಿಸ್ಥಿತಿಯೇ ವಾಸಿ ಎನಿಸುವಷ್ಟರ ಮಟ್ಟಿಗೆ ಕರೋನಾ ವೈರಾಣುವಿನ ಸೋಂಕುಗಳನ್ನು ಹತ್ತಿಕ್ಕಲಾಗಿರುವುದು ಸ್ವಲ್ಪ ಮಟ್ಟಿಗೆ ಸಮಾಧಾನ ತರುವ ವಿಷಯವಾಗಿದೆ.

ಕರೋನಾ ವೈರಾಣು ಸೋಂಕಿನ ಮೊದಲ ಎರಡು ಅಲೆಗಳ ಕಷ್ಟಗಳನ್ನು ಅನುಭವಿಸಿರುವ ನಾವು ಹಲವು ರೀತಿಯ ಪಾಠಗಳನ್ನು ಕಲಿತಿದ್ದೇವೆ. ಈ ಪಾಠಗಳನ್ನು ಮರೆಯದೇ ನಾವೆಲ್ಲರೂ ಮತ್ತೊಮ್ಮೆ ಜಾಗ್ರತೆ ವಹಿಸಿ ಹೊಸ ರೂಪದ ವೈರಾಣುವಿನಿಂದ ಬರಬಹುದಾದ ತೊಂದರೆಗಳನ್ನು ಎದುರಿಸಲು ಅಣಿಯಾಗಬೇಕಾಗಿದೆ. ಮತ್ತೊಮ್ಮೆ ನಮ್ಮ ಹತ್ತಿರದ ಬಂಧು ಮಿತ್ರರಿಗೆ ಸೋಂಕು ಹತ್ತಿದಲ್ಲಿ ಏನು ಮಾಡಬೇಕು ಎಂದು ಸಿದ್ಧವಾಗಬೇಕಾಗಿದೆ. ಲಾಕ್ ಡೌನ್ ಪರಿಸ್ಥಿತಿ ಎದುರಿಸಲು, ವಾಣಿಜ್ಯ ಹಾಗೂ ಉದ್ಯಮಗಳು ಸ್ಥಗಿತಗೊಳ್ಳುವ, ದೈನಂದಿನ ಬಳಕೆ ಪದಾರ್ಥಗಳ ಕೊರತೆ ಉಂಟಾಗುವ, ಹಣ ಮತ್ತು ಇತರ ಸಂಪನ್ಮೂಲಗಳ ಕೊರತೆ ಉಂಟಾಗುವ ಪರಿಸ್ಥಿಗಳನ್ನು ಎದುರಿಸಲು ಸೂಕ್ತ ಸಿದ್ಧತೆಗಳನ್ನು ಮಾಡಿಕೊಳ್ಳುವ ಅನಿವಾರ್ಯತೆ ಕಾಣಿಸತೊಡಗಿದೆ.

ಮುಖ್ಯವಾಗಿ ಹೊಸ ಯೋಜನೆಗಳನ್ನು ಪ್ರಾರಂಭಿಸುವ ಹಂತದಲ್ಲಿರುವವರು, ಆಪತ್ತುಗಳು ಇರಬಹುದಾದ ಚಟುವಟಿಕೆಗಳಲ್ಲಿ ತೊಡಗಿರುವವರು, ಹೊಸ ಉದ್ಯೋಗಗಳತ್ತ ಚಿತ್ತ ಹರಿಸುತ್ತಿರುವವರು ಎಚ್ಚೆತ್ತುಕೊಂಡು ಹುಷಾರಿಯಲ್ಲಿರಬೇಕು. ಜೊತೆಗೆ ವ್ಯಕ್ತಿಗಳು ಮತ್ತು ಸಂಘ ಸಂಸ್ಥೆಗಳು ಹಣ ಮತ್ತು ಸಂಪನ್ಮೂಲಗಳ ಉಳಿತಾಯ ಮಾಡುವತ್ತ ಗಮನ ಹರಿಸಬೇಕು. ಮಾನವ ಸಂಘಜೀವಿ ಎಂದು ಮರೆತಿರುವವರು ಬಂಧು ಮಿತ್ರರ ಜೊತೆ ಕೈ ಜೋಡಿಸಬೇಕು.

೨೦೨೨ ರಲ್ಲಿ ಭಾರತದ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಉತ್ತಮಗೊಂಡು ಸರ್ವ ಕ್ಷೇತ್ರಗಳಲ್ಲಿ ಆರ್ಥಿಕ ಚಟುವಟಿಕೆಗಳು ಬಿರುಸುಗೊಂಡಿದ್ದವು. ಅದೇ ರೀತಿಯ ಪ್ರಗತಿಯನ್ನು ಬರಲಿರುವ ಹೊಸ ವರ್ಷ ೨೦೨೩ರಲ್ಲಿಯೂ ಕಾಣುತ್ತೇವೆಂದು ಆಶಾಭಾವನೆಯನ್ನು ಹೊತ್ತಿರುವ ಸಮಯದಲ್ಲಿ ವಿಪತ್ತು ಬರಬಹುದೆಂಬ ಎಚ್ಚರಿಕೆ ಘಂಟೆಯನ್ನು ಬಾರಿಸಬೇಕಾಗಿ ಬಂದಿರುವುದು ದುಃಖ ತರುವ ವಿಷಯವಾಗಿದೆ.

ಉದಯವಾಗುತ್ತಿರುವ ೨೦೨೩ನೇ ಇಸವಿಯಲ್ಲಿ ನಾವು ಹೆದರಿರುವಂತೆ ಹೊಸ ಕರೋನಾ ಅಲೆ ಬರಲಾರದು, ತಜ್ಞರು ಮಾಡಿರುವ ಅಂದಾಜುಗಳು ತಪ್ಪಾಗಿರಬಹುದು, ವಿಶ್ವದ ಜನತೆಗೆ ಈ ಹೊಸ ಕಷ್ಟ ಕೋಟಲೆಗಳನ್ನು ಅನುಭವಿಸುವ ದೌರ್ಭಾಗ್ಯ ಬರಲಾರದು, ೨೦೨೩ ನೇ ಇಸವಿಯಲ್ಲಿ ಭಾರತ ಹಾಗೂ ಪ್ರಪಂಚದ ಎಲ್ಲಾ ದೇಶಗಳಲ್ಲಿ ಸಮೃದ್ಧತೆ ತುಂಬಿತುಳುಕಾಡಿ ವಿಶ್ವದ ಎಂಟು ಬಿಲಿಯ ಮಾನವರು ಹಾಗೂ ಬಿಲಿಯಾಂತರ ಇತರ ಜೀವಿಗಳು ಎಲ್ಲವೂ ಸುಖ, ಶಾಂತಿ, ನೆಮ್ಮದಿಯಿಂದ ತಮ್ಮ ತಮ್ಮ ಜೀವನ ನಡೆಸುವಂತೆ ಆಗಲಿ ಎಂದು ಆಶಿಸೋಣ.

**ಸಮಸ್ತ ಸನ್ಮಂಗಳಾನಿ ಭವಂತು.**
**ಸರ್ವೇ ಜನಾಃ ಸುಖಿನೋ ಭವಂತು**

– ಬಿ.ಆರ್. ರವೀಂದ್ರನಾಥ್

## ದತ್ತಿದಾನಿಗಳ ವಿವರ

### ಶ್ರೀ ಸಾಹಿತ್ಯ ಪ್ರಶಸ್ತಿ

ಹೊಸಗನ್ನಡದಲ್ಲಿ ನವೋದಯ ಕಾವ್ಯದ ಹರಿಕಾರರಾಗಿದ್ದು, ಇಪ್ಪತ್ತನೆಯ ಶತಮಾನದ ಮೊದಲ ಕನ್ನಡ ಚಳುವಳಿಗಾರರೆನ್ನಬಹುದಾದ ಬಿ.ಎಂ.ಶ್ರೀ. ಅವರ ಹೆಸರಿನಲ್ಲಿ ೨೦೧೪ರವರೆಗೆ ಹೆಮ್ಮೆಯಿಂದ ಸ್ಮರಿಸಿಕೊಳ್ಳುವ ಪ್ರಶಸ್ತಿ ಯಾವುದೂ ಸ್ಥಾಪನೆಗೊಂಡಿರಲಿಲ್ಲ. ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಶಾ. ಬಾಲುರಾವ್ ಅವರು, ಬಿ.ಎಂ.ಶ್ರೀ. ಅವರ ಹೆಸರಿನಲ್ಲಿ 'ಶ್ರೀ ಸಾಹಿತ್ಯ ಪ್ರಶಸ್ತಿ'ಯನ್ನು ಪ್ರತಿವರ್ಷ ನೀಡಲು ದತ್ತಿಯೊಂದನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಗಣನೀಯ ಕೊಡುಗೆಯಿತ್ತ ಸಾಹಿತಿಯೊಬ್ಬರಿಗೆ ಪ್ರದಾನ ಮಾಡುವ ಒಂದು ಲಕ್ಷ ರೂಪಾಯಿಗಳ ನಗದನ್ನೊಳಗೊಂಡ ಪುರಸ್ಕಾರವಿದು. ಮೂರು ಮಂದಿ ಹಿರಿಯ ವಿದ್ವಾಂಸ ವಿಮರ್ಶಕರನ್ನೊಳಗೊಂಡ ಸಮಿತಿ ಈ ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆಮಾಡುತ್ತದೆ.

### ಶ್ರೀಮತಿ ಕಮಲಿನಿ ಬಾಲುರಾವ್

ಶ್ರೇಷ್ಠ ಸಾಹಿತಿ, ಅನುವಾದಕರು ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯದರ್ಶಿಗಳೂ ಆಗಿದ್ದ ಶ್ರೀ ಶಾ.ಬಾಲುರಾಯರ ಪತ್ನಿ ಮತ್ತು ಹೊಸಗನ್ನಡದ ಆಚಾರ್ಯ ಬಿ.ಎಂ.ಶ್ರೀ. ಅವರ ಮಗಳು ತಂಗಮ್ಮ ಮತ್ತು ಅಳಿಯ ಎನ್. ನಾಗರಾಜರಾವ್ ಅವರ ಪುತ್ರಿಯಾದ ಶ್ರೀಮತಿ ಕಮಲಿನಿ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ನೀಡಿರುವ ಕೊಡುಗೆ ಅಪಾರ. ವಿವಿಧ ಪ್ರಶಸ್ತಿಗಳು ಮತ್ತು ನೆರವಿನ ರೂಪದಲ್ಲಿ ಲಕ್ಷಾಂತರ ರೂಪಾಯಿಗಳನ್ನು ದೇಣಿಗೆಯಾಗಿ ನೀಡಿದ್ದಾರೆ.

### ಹಾಸ್ಯ ಬ್ರಹ್ಮ ಟ್ರಸ್ಟ್

ಸದಭಿರುಚಿಯ ಹಾಸ್ಯ ಪ್ರಚಾರಕ್ಕಾಗಿ ಹಾಸ್ಯಬ್ರಹ್ಮ ಟ್ರಸ್ಟ್ ಅನ್ನು ಸಮಾನಮನಸ್ಕ ಸ್ನೇಹಿತರೊಂದಿಗೆ ೨೦೦೩ರಲ್ಲಿ ಸ್ಥಾಪಿಸಲಾಯಿತು. ಹಾಸ್ಯ ಬ್ರಹ್ಮ ಟ್ರಸ್ಟ್ ನ ಆಶಯದಂತೆ ಸುಮಾರು ವರ್ಷಗಳ ಕಾಲ ಸದಭಿರುಚಿಯ ಹಾಸ್ಯ ಸಾಹಿತ್ಯವನ್ನು ಹಾಸ್ಯೋತ್ಸವಗಳ ಮೂಲಕ, ಹಾಸ್ಯ ಪುಸ್ತಕಗಳ ಪ್ರಕಟಣೆಯ ಮೂಲಕ, ಹಾಸ್ಯ ಸೆಮಿನಾರುಗಳನ್ನು ಆಯೋಜಿಸುವ ಮೂಲಕ, ಹಾಸ್ಯ ಕಾರ್ಯಕ್ರಮಗಳನ್ನು ಸಂಘಟಿಸುವ ಮೂಲಕ, ಹಾಸ್ಯ ಬರಹಗಾರರಿಗೆ, ವ್ಯಂಗ್ಯ ಚಿತ್ರಕಾರರಿಗೆ ಆರ್ಥಿಕ ನೆರವು ನೀಡುವುದರ ಮೂಲಕ ಮತ್ತು ಹಲವಾರು ಸಮಾಜಮುಖೀ ಕಾರ್ಯಗಳ ಮೂಲಕ ಹಾಸ್ಯಬ್ರಹ್ಮ ಟ್ರಸ್ಟ್ ತನ್ನ ಗುರಿಯಲ್ಲಿ ಬಹುತೇಕ ಯಶಸ್ಸನ್ನು ಸಾಧಿಸಿದೆ ಹಾಗೂ ಸಾರಸ್ವತ ಲೋಕದಲ್ಲಿ ತನ್ನದೇ ಆದ ಹೆಸರನ್ನು ಛಾಪಿಸಿದೆ. ಕೊಂಚ ಮಟ್ಟಿಗೆ ಆರ್ಥಿಕವಾಗಿಯೂ ಸಧೃಡವಾಗಿರುವ ಸಂಸ್ಥೆ ಎಂದು ಹೆಸರು ಮಾಡಿದೆ.

# ಜನವರಿ ೨೦೨೩ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**೦೧-೦೧-೨೦೨೩ ಭಾನುವಾರ ಬೆಳಗ್ಗೆ : ೧೦.೦೦**

**ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟದ ಸಹಯೋಗದಲ್ಲಿ 'ಕುವೆಂಪು-ವರ್ತಮಾನದ ಬೆಳಕಿನಲ್ಲಿ' ಒಂದು ದಿನದ ವಿಚಾರ ಸಂಕಿರಣ ಮತ್ತು ಧ್ವಜ ಸ್ತಂಭ ಉದ್ಘಾಟನೆ**

**ಉದ್ಘಾಟಕರು : ನಾಡೋಜ ಡಾ. ಬರಗೂರು ರಾಮಚಂದ್ರಪ್ಪ**
ಸುಪ್ರಸಿದ್ಧ ಸಾಹಿತಿಗಳು, ಚಲನಚಿತ್ರ ನಿರ್ದೇಶಕರು

**ಅಧ್ಯಕ್ಷತೆ : ಶ್ರೀ ಎಂ. ತಿಮ್ಮಯ್ಯ**
ಅಧ್ಯಕ್ಷರು, ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ

**೦೪-೦೧-೨೦೨೩ ಬುಧವಾರ ಸಂಜೆ : ೫.೦೦**

**ಹಾಸ್ಯಬ್ರಹ್ಮ ಟ್ರಸ್ಟ್ ದತ್ತಿ**

**ಉಪನ್ಯಾಸಕರು : ಡಾ. ಕೆ.ಪಿ. ಪುತ್ತೂರಾಯ**
ವಿಶ್ರಾಂತ ನಿರ್ದೇಶಕರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ

**ವಿಷಯ : ಬದುಕಿನಲ್ಲಿ ಹಾಸ್ಯ**

**೧೦-೦೧ -೨೦೨೩ ಮಂಗಳವಾರ ಸಂಜೆ : ೫.೦೦**

**ಶ್ರೀಮತಿ ರಂಗನಾಯಕಮ್ಮ - ಶ್ರೀ ಜಿ. ಸುಬ್ಬರಾವ್ ದತ್ತಿ ಸಂಗೀತ ಕಾರ್ಯಕ್ರಮ**

**ನಡೆಸಿಕೊಡುವವರು : ಶ್ರೀಮತಿ ಸಂಧ್ಯಾ ಶ್ರೀನಾಥ್**

**೨೨-೦೧-೨೦೨೩ ಭಾನುವಾರ ಬೆಳಗ್ಗೆ : ೧೦.೩೦**

**'ಶ್ರೀ ಸಾಹಿತ್ಯ ಪ್ರಶಸ್ತಿ' ಪ್ರದಾನ ಸಮಾರಂಭ**

**೨೫-೦೧-೨೦೨೩ ಬುಧವಾರ ಬೆಳಗ್ಗೆ : ೧೧.೦೦**
ಶ್ರೀಮತಿ ಬಿ.ಜಿ.ಕುಸುಮಾ ಮತ್ತು ಕುಟುಂಬದವರು

**ದಿ.ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಗಮಕ ದತ್ತಿ ಕಾರ್ಯಕ್ರಮ**

**ವಿಷಯ : ಕುಮಾರವ್ಯಾಸ ಭಾರತದಲ್ಲಿ "ಸೌಗಂಧಿಕ ಪುಷ್ಪ"**

**ವಾಚನ : ಶ್ರೀಮತಿ ರಾಜಶ್ರೀ ರಂಗನಾಥ್**

**ವ್ಯಾಖ್ಯಾನ : ಶ್ರೀಮತಿ ಶಾಂತಾ ನಾಗಮಂಗಲ**

೧ನೇ ಪುಟದಿಂದ

'ನಂಟರು' ಲಲಿತ ಪ್ರಬಂಧವು ಪ್ರಶ್ನೆಗಳಿಗೇ ಮೀಸಲಾದಂತಿದೆ. ಪ್ರಶ್ನೆಯಲ್ಲೇ ಪ್ರಾರಂಭವಾಗಿ, ಪ್ರಶ್ನೆ ಉತ್ತರಗಳ ರೂಪದಲ್ಲಿದೆ. ೬೦ ವರ್ಷದ ಹಿಂದೆ ಬರೆದಿರುವ ಅವರ ಲಲಿತ ಪ್ರಬಂಧಗಳು ಇಂದಿಗೂ ಪ್ರಸ್ತುತವಾಗಿವೆ. ಪ್ರಸ್ತುತ ಓದುವ ಸಂಸ್ಕೃತಿ ಕ್ಷೀಣಿಸುತ್ತಿರುವ ಸಮಯದಲ್ಲಿ ತೀ.ನಂ.ಶ್ರೀ. ಅವರ ಲಲಿತ ಪ್ರಬಂಧಗಳು ಕನ್ನಡಕ್ಕೆ ಒಂದು ವಿಶೇಷ ಕೊಡುಗೆ ಎಂದು ಅಭಿಪ್ರಾಯಪಟ್ಟರು. ಸರ್.ಎಂ.ವಿಶ್ವೇಶ್ವರಯ್ಯ ಅವರನ್ನು ಕುರಿತಾದ ಪ್ರಬಂಧವು ವಿಶಿಷ್ಟ ಮಾಹಿತಿಗಳನ್ನೊಳಗೊಂಡಿದೆ ಎಂದು ಹೇಳಿದರು.

ಉಪನ್ಯಾಸ ಮುಗಿದ ನಂತರ ಪ್ರೊ. ಜಿ. ಅಶ್ವತ್ಥನಾರಾಯಣ ಅವರು ತೀ.ನಂ.ಶ್ರೀ.ಯವರೊಂದಿಗೆ ತಮಗಿದ್ದ ಒಡನಾಟ, ಅವರೊಂದಿಗಿನ ಚಿಂತನೆ, ಆಲೋಚನೆಗಳನ್ನು ಹಂಚಿಕೊಂಡಿದ್ದು, ಡಾ. ಪಿ. ನಂಜುಂಡ ಅವರು ನೀಡಿದ ಉಪನ್ಯಾಸಕ್ಕೆ ಪೂರಕವಾಗಿತ್ತು. ಅಧ್ಯಕ್ಷತೆ ವಹಿಸಿ ಮಾತನಾಡಿದ ಡಾ. ಬೈರಮಂಗಲ ರಾಮೇಗೌಡ "ಕುವೆಂಪು ಅವರಿಂದ 'ಆಚಾರ್ಯ ಕೃತಿ' ಎನಿಸಿಕೊಂಡ 'ಭಾರತೀಯ ಕಾವ್ಯ ಮೀಮಾಂಸೆ' ಯಂಥ ಅದ್ಭುತ ಕೃತಿಯನ್ನು ಕನ್ನಡಕ್ಕೆ ಕೊಟ್ಟ ತೀರ್ಥಪುರ ನಂಜುಂಡಯ್ಯ ಶ್ರೀಕಂಠಯ್ಯ ಅವರು ಕಾವ್ಯ ಮೀಮಾಂಸೆ, ಭಾಷಾವಿಜ್ಞಾನ, ಛಂದಸ್ಸು, ಸಾಹಿತ್ಯ ವಿಮರ್ಶೆ, ಪ್ರಬಂಧ ಸಾಹಿತ್ಯ, ಗ್ರಂಥಸಂಪಾದನೆ, ಅನುವಾದ ಸಾಹಿತ್ಯ ವಿಷಯಗಳಲ್ಲಿ ತಜ್ಞತೆ ಪಡೆದುಕೊಂಡು ಈ ಕ್ಷೇತ್ರಗಳನ್ನು ಶ್ರೀಮಂತಗೊಳಿಸಿದವರು. ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕನ್ನಡ ವಿಭಾಗದ ಮೊಟ್ಟ ಮೊದಲ ಪ್ರಾಧ್ಯಾಪಕರಾಗಿದ್ದರು. ಆದರ್ಶ ಪ್ರಾಧ್ಯಾಪಕರಾಗಿ ಅನುಪಮ ವಾಗ್ಮಿಯಾಗಿ ಪ್ರಸಿದ್ಧರಾಗಿದ್ದರು" ಎಂದು ಹೇಳಿದರು.

ಡಾ. ಪ್ರಭಾಕರ್ ಬೆಲವಾಡಿ ಅವರು ಎಲ್ಲರಿಗೂ ವಂದನೆ ಅರ್ಪಿಸಿದರು.

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೧೪-೧೨-೨೦೨೨

ವಿ.ಸೀ., ಶಾಂತಾ ಪ್ರಭುಶಂಕರ, ವೆಂಕಟರಂಗಪ್ಪ, ಚಂದ್ರಶೇಖರಶರ್ಮ, ಟಿ.ಎನ್. ಮಹಾದೇವಯ್ಯ, ಜಿ.ಪಿ.ರಾಜರತ್ನಂ, ರಾಮಚಂದ್ರ ಪಟವಾರಿ, ಬಿ.ಎಂ.ಶ್ರೀ. ದತ್ತಿಗಳ ಸಂಯೋಜಿತ ಕಾರ್ಯಕ್ರಮ

ವಿಷಯ : ಜಿ.ಪಿ.ರಾಜರತ್ನಂ ಅವರ ರತ್ನನ ಪದಗಳು

ಉಪನ್ಯಾಸಕರು : ಡಾ. ಅರ್ಚನಾ ಆರ್.

ವಿಜಯ ಪದವಿ ಪೂರ್ವ ಕಾಲೇಜು, ಜಯನಗರ




ಶ್ರೀ ಬಿ.ಎಸ್.ಗುರುಪ್ರಸಾದ್ ಅವರು ದತ್ತಿದಾನಿಗಳ ಆಶಯ ಮತ್ತು ಈವರೆಗೆ ದತ್ತಿ ನಿಧಿಯಡಿಯಲ್ಲಿ ಆಯೋಜಿಸಿದಂತಹ ಕಾರ್ಯಕ್ರಮಗಳನ್ನು ಸಂಕ್ಷಿಪ್ತವಾಗಿ ಸಭೆಗೆ ಪರಿಚಯಿಸುವ ಮೂಲಕ ಕಾರ್ಯಕ್ರಮ ಪ್ರಾರಂಭಗೊಂಡಿತು. ಈಗಿನ ಯುವಪೀಳಿಗೆಯ ವಿದ್ವಾಂಸರು, ಪೂರ್ವಸೂರಿಗಳು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಯನ್ನು ಅರಿತುಕೊಳ್ಳುವ ಸಲುವಾಗಿಯೇ ಪ್ರತಿಷ್ಠಾನವು ದತ್ತಿನಿಧಿಯ ಕಾರ್ಯಕ್ರಮಗಳಿಗೆ ಯುವ ಉಪನ್ಯಾಸಕರನ್ನು ಆಹ್ವಾನಿಸಿ ಉಪನ್ಯಾಸಗಳನ್ನು ನಡೆಸುತ್ತಿರುವುದಾಗಿ ಡಾ. ಶಾಂತರಾಜು ತಿಳಿಸಿದರು. ಅದರಂತೆ ಉಪನ್ಯಾಸಕರಾಗಿ ಆಗಮಿಸಿರುವ ಡಾ.ಅರ್ಚನಾ ಆರ್. ಅವರನ್ನು ಆದರದಿಂದ ಸ್ವಾಗತಿಸಿ, ಅವರ ಪರಿಚಯವನ್ನು ಮಾಡಿಕೊಟ್ಟು, ಎಲ್ಲರಿಗೂ ಸ್ವಾಗತ ಕೋರಿದರು.

ಜಿ.ಪಿ.ರಾಜರತ್ನಂ ಅವರ ಜನನ, ವಿದ್ಯಾಭ್ಯಾಸ, ಅಧ್ಯಾಪಕ ವೃತ್ತಿಯ ಬಗೆಗೆ ಹೇಳಿ, ತಮ್ಮ ಬದುಕಿನ ಅನುಭವಗಳ ಬಂಡವಾಳದಿಂದಲೇ ಜಿ.ಪಿ.ರಾಜರತ್ನಂ ಶ್ರೇಷ್ಠ ಸಾಹಿತಿಯಾಗಿ ರೂಪುಗೊಂಡಿದ್ದನ್ನು ಅರ್ಚನಾ ಅವರು ಮನಮುಟ್ಟುವ ರೀತಿಯಲ್ಲಿ ತಿಳಿಸಿದರು. ರಾಜರತ್ನಂ ಅವರ ಕೃತಿಗಳು ಸಮಗ್ರ ಕರ್ನಾಟಕದ ಆಸ್ತಿಯೆಂದು ಕನ್ನಡ ಸಾರಸ್ವತ ಲೋಕ ಈಗಲೂ ಪರಿಗಣಿಸುತ್ತಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ 'ಕುಡುಕರ ಸಾಹಿತ್ಯ', ರಾಜರತ್ನಂ ಅವರ ಪ್ರಯೋಗಶೀಲತೆ ಎನಿಸಿಕೊಂಡಿದೆ. ಕುಡುಕರ ಅಂತರಂಗದ ಮಾತುಗಳನ್ನು ಗಮನಿಸಿ, ವೇದಾಂತವನ್ನು ಕಂಡುಕೊಂಡು, 'ರತ್ನನ ಪ್ರಪಂಚ' ವನ್ನು ಸೃಷ್ಟಿಸಿದರು. ಅವರ 'ಪುಟ್ನಂಜಿಯ ಪದಗಳು' ವಿಶಿಷ್ಟವಾದ ದಾಂಪತ್ಯ ಸಾಹಿತ್ಯವಾಗಿ ಹೊರಹೊಮ್ಮಿದ್ದುಂಟು ಎಂದು ಹೇಳಿ ಕೆಲವು ಪದ್ಯಗಳನ್ನು ಉದಾಹರಿಸಿದರು. ಎಲ್ಲಾ ಕಾಲಕ್ಕೂ ಸಮಕಾಲೀನವೆನಿಸುವ ಅವರ ಗ್ರಾಮ್ಯಭಾಷೆಯ ಸೊಗಡು, ಲಯ, ನಿರೂಪಣಾ ಶೈಲಿಯಲ್ಲಿ ಕನ್ನಡ ಭಾಷೆಯ ಮೇಲಿನ ಅಭಿಮಾನ ವ್ಯಕ್ತವಾಗಿದೆ.

ರಾಜರತ್ನಂ ತಮ್ಮ ಆತ್ಮಚರಿತ್ರೆ 'ಹತ್ತು ವರುಷ' ದಲ್ಲಿ 'ರತ್ನನ ಪದಗಳು' ಸೃಷ್ಟಿಯಾದ ಹಿನ್ನೆಲೆಯನ್ನು ದಾಖಲಿಸಿದ್ದಾರೆ. ತಮ್ಮ ಮೇಲೆ ಟಿ.ಪಿ.ಕೈಲಾಸಂ ಅವರ ನಿಚ್ಚಳವಾದ ಪ್ರಭಾವ ಇರುವುದನ್ನು ಮುಕ್ತವಾಗಿ ಒಪ್ಪಿಕೊಂಡಿದ್ದಾರೆ. ಶಿವರಾಮ ಕಾರಂತರೊಂದಿಗೆ ದೀರ್ಘವಾದ ಸ್ನೇಹ ಹೊಂದಿದ್ದ ರಾಜರತ್ನಂ ಅವರು, ಬುದ್ಧನ ಜಾತಕದ ಕಥೆಗಳನ್ನು ಅಚ್ಚುಹಾಕಿಸಲು ಮಂಗಳೂರಿಗೆ ಭೇಟಿನೀಡಿದ್ದನ್ನೂ ಮತ್ತು 'ಯೆಂಡ್ಕುಡ್ಕ ರತ್ನ' ನ ಪದಗಳನ್ನು ಸ್ವತಃ ತಾವೇ ಹಾಡುತ್ತಿದ್ದುದನ್ನೂ ಜ್ಞಾಪಿಸಿಕೊಂಡಿರುವುದನ್ನು ಶ್ರೀಮತಿ ಅರ್ಚನಾ ಅವರು ಪ್ರಸ್ತಾಪಿಸಿದರು. ೧೯೩೧ರ ಮಡಿಕೇರಿಯ ಸಾಹಿತ್ಯ ಸಮ್ಮೇಳನದಲ್ಲಿ 'ಯೆಂಡ್ಕುಡ್ಕ ರತ್ನ' ಮತ್ತು 'ಮಡಿಕೇರಿಲಿ ಮಂಜು' ಎಂಬ ಕವನಗಳನ್ನು ಬರೆದು, ಹಾಡಿದ್ದಾಗಿಯೂ ತಿಳಿಸಿದರು. ವಿ.ಸೀ., ಕೆ.ವಿ.ಅಯ್ಯರ್, ರಾಶಿ, ನಾ. ಕಸ್ತೂರಿ, ಮಾಸ್ತಿ ಮುಂತಾದ ಹಳೆಯ ತಲೆಮಾರಿನ ಸಾಹಿತಿಗಳಲ್ಲಿ ರಾಜರತ್ನಂ ಅವರು ವಿರಳರೆಂದೆನಬಹುದು, ರಾಜರತ್ನಂ ಅವರು ಎಂ.ಎ. ವಿದ್ಯಾರ್ಥಿಯಾಗಿದ್ದ ಸಮಯದಲ್ಲಿ ತಾವು ರಚಿಸಿದ ಕವನವೊಂದಕ್ಕೆ ಬಿ.ಎಂ.ಶ್ರೀ. ಅವರು ಕೊಡಮಾಡುವ ಸ್ವರ್ಣ ಪದಕ ಪಡೆದುಕೊಂಡು, ಅದನ್ನು ಮಾರಿ ಬಂದ ಹಣದಿಂದಲೇ 'ಯೆಂಡ್ಕುಡ್ಕ ರತ್ನ' ವನ್ನು ಅಚ್ಚುಹಾಕಿಸಿದ್ದರೆಂದು ತಿಳಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿಕೊಂಡಿದ್ದ ಡಾ. ಬೈರಮಂಗಲ ರಾಮೇಗೌಡ "ಮಕ್ಕಳ ಸಾಹಿತ್ಯವನ್ನು ಲಘುವಾಗಿ ಕಾಣುತ್ತಿದ್ದ ದಿನಗಳಲ್ಲಿ ಮಕ್ಕಳ ಭಾವಕೋಶವನ್ನು ಅರಳಿಸುವ, ಮನದಲ್ಲಿ ಬಹುಕಾಲ ಉಳಿಯುವಂಥ, ಸೊಗಸಾದ ಪ್ರಾಸ ಲಯಗಳಿಂದ ಕೂಡಿದ ಪದ್ಯಗಳನ್ನು ರಾಜರತ್ನಂ ಬರೆದರು. ನಾವು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಪಠ್ಯಭಾಗವಾಗಿದ್ದ ಅವರ "ನಾಯಿಮರಿ ನಾಯಿಮರಿ ತಿಂಡಿಬೇಕೆ?", "ಒಂದು ಎರಡು ಬಾಳಲೆ ಹರಡು", "ಹತ್ತು ಹತ್ತು ಇಪ್ಪತ್ತು, ತೋಟಕೆ ಹೋದನು ಸಂಪತ್ತು ", "ಬಣ್ಣದ ತಗಡಿನ ತುತ್ತೂರಿ, ಕಾಸಿಗೆ ಕೊಂಡನು ಕಸ್ತೂರಿ" ಪದ್ಯಗಳು ಈಗಲೂ ನೆನಪಿನಲ್ಲಿ ಉಳಿದಿವೆ. ಹಳಗನ್ನಡದಲ್ಲಿ ಪರಿಣಿತರಾಗಿದ್ದ ರಾಜರತ್ನಂ ಹೊಸಗನ್ನಡವನ್ನೂ ಸರಸಮಯವಾಗಿ ಬಳಸುತ್ತಿದ್ದರು. ಸರ್ವಧರ್ಮ ಸಮನ್ವಯ ಅವರು ನಂಬಿ ನಡೆದ ಮೌಲ್ಯವಾಗಿತ್ತು. ಸಾಹಿತ್ಯ ಪರಿಚಾರಿಕೆಯ ಮೂಲಕ ಜನರಿಗೆ ಅವರು ಸಾಹಿತ್ಯವನ್ನು ಪರಿಚಯ ಮಾಡಿಕೊಟ್ಟ ರೀತಿ ನಮಗೆಲ್ಲ ಆದರ್ಶವಾಗುವಂಥದ್ದು. ಮೈಸೂರಿನಲ್ಲಿ ಹೆಂಡದ ಅಂಗಡಿಯ ದೃಶ್ಯಗಳನ್ನು ನೋಡಿದ ಪರಿಣಾಮವಾಗಿ 'ಯೆಂಡ್ಕುಡ್ಕ ರತ್ನ' ಅನನ್ಯ ಕೃತಿ ಹೊರಬಂತು" ಎಂದು ಹೇಳಿದರು.

ಡಾ. ಪ್ರಭಾಕರ ಬೆಲವಾಡಿಯವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು.



# ಪದಚರಿತೆ



**ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ**

– ಡಾ. ಪಿ.ವಿ. ನಾರಾಯಣ

**ಷೋಡಶೋಪಚಾರ:** ಈ ಸಂಸ್ಕೃತ ಸಮಾಸ ಪದದಲ್ಲಿ ಎರಡು ಭಾಗಗಳಿವೆ: ಷೋಡಶ ಮತ್ತು ಉಪಚಾರ. ದೇವರಿಗೆ ಮಾಡಬೇಕಾದ ಹದಿನಾರು ಬಗೆಯ ಸೇವೆಯನ್ನು ಇದು ಹೇಳುತ್ತದೆ: ವಚನಗಳಿಗಿಂತ ಹೆಚ್ಚು ಪ್ರಾಚೀನವಾದ ಕನ್ನಡ ಕಾವ್ಯಗಳಲ್ಲಿ ಇದರ ಉಲ್ಲೇಖವಿದ್ದಂತಿಲ್ಲ; ಹೀಗಾಗಿ ಇದು ಈಚಿನ ಪರಿಕಲ್ಪನೆಯಿರಬಹುದು. ಬಸವಣ್ಣನ ವಚನವೊಂದರಲ್ಲಿ "ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವುದು" ಎಂಬ ಮಾತು ದೊರೆಯುತ್ತದೆ. ಹಾಗೆಯೇ "ಅಷ್ಟವಿಧಾರ್ಚನೆ ಷೋಡಶೋಪಚಾರ ಸನ್ನಿಹಿತಂಗೆ ಅವಗುಣಗಳುಂಟೆ" ಎಂಬ ವಾಕ್ಯ ಚೆನ್ನಬಸವಣ್ಣನ ವಚನವೊಂದರಲ್ಲಿದೆ. ಸೋಮದೇವನ 'ಉದ್ಭಟಕಾವ್ಯ'ದಲ್ಲಿ "ಷೋಡಶೋಪಚಾರದಿಂದೆ ಪೂಜೆಗೈದು ಶೀತರುಕ್‌ಚೂಡ ನೀಲಕಂಠದೇವನಂ" ಎಂಬ ವಾಕ್ಯವಿದೆ. ಆದಯ್ಯನೆಂಬೊಬ್ಬ ವಚನಕಾರನು 'ಷೋಡಶೋಪಚರ್ಯ' ಎಂಬ ರೂಪವನ್ನು ಬಳಸುತ್ತಾನೆ ("ಅಷ್ಟವಿಧಾರ್ಚನೆ ಷೋಡಶೋಪಚರ್ಯಂಗಳಿಂದ ಇಷ್ಟಲಿಂಗಧಾರಣದಿಂದಪ್ಪುದು ಧಾರಣಯೋಗ"). ಭೀಮಕವಿಯ 'ಬಸವ ಪುರಾಣ'ದಲ್ಲಿ 'ಷೋಡಶೋಚಾರ' ("ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ" ಎಂಬ ಪ್ರಯೋಗದ ಜೊತೆ 'ಷೋಡಶೋಪಚರಣೆ' ("ಷೋಡಶೋಪಚರಣೆಯೆಸೆಯೆ ಶಿವರಾತ್ರಿವಿಧಿಯಲಿ") ಎಂಬ ರೂಪವೂ ದೊರೆಯುತ್ತದೆ. ವಾಹನ, ಆಶನ, ಪಾದ್ಯ, ಅರ್ಘ್ಯ, ಸ್ನಾನೋದ್ವರ್ತನ, ವಸ್ತ್ರ, ಉಪವೀತ, ಗಂಧ, ಧೂಪ, ದೀಪ, ನೈವೇದ್ಯ, ಆಚಮನ, ಫಲ, ತಾಂಬೂಲ ಮತ್ತು ಪ್ರದಕ್ಷಿಣಗಳು 'ಗೌತಮ ಧರ್ಮಸೂತ್ರ'ವು ಹೇಳುವ ಹದಿನಾರು ಬಗೆಯ ಉಪಚಾರಗಳು. 'ಧರ್ಮಸಿಂಧು'ವಿನಲ್ಲಿ ಇದಕ್ಕೆ ಭಿನ್ನವಾದ ವಿವರವಿದೆ. ಮಹಾದೇವಿಯಕ್ಕನ ವಚನವೊಂದರಲ್ಲಿ ಇದರ ಪಟ್ಟಿ ಹೀಗಿದೆ: ಮಜ್ಜನ, ದೇವಾಂಗ, ಪರಿಮಳ, ಅಕ್ಷತೆ, ಪುಷ್ಪ, ಧೂಪ, ಆರತಿ, ಮೃಷ್ಟಾನ್ನ, ಪಾನ, ಹಸ್ತಪ್ರಕ್ಷಾಲನ, ತಾಂಬೂಲ, ಆಸನ, ಸಂಗೀತವಾದ್ಯ, ಭೂಷಣ, ವಾಹನ ಮತ್ತು ಗೃಹ – "ಇಂತೀ ಹದಿನಾರು ತೆರದ ಭಕ್ತಿಯನು ಚರಲಿಂಗಕ್ಕೆ ಕೊಟ್ಟು ಆ ಚರಲಿಂಗಮೂರ್ತಿ ಭೋಗಿಸಿದ ಬಳಿಕ" ತಾನು ಭೋಗಿಸುವುದಾಗಿ ಹೇಳಿದೆ. ಎಂದರೆ ಇವುಗಳನ್ನೆಲ್ಲ ತಾನು ಅನುಭವಿಸುವುದಕ್ಕೆ ಮುಂಚೆ ಜಂಗಮನಿಗೆ ಅರ್ಪಿಸಬೇಕು ಎಂಬುದು ಭಕ್ತನ ನಿಲವು. ಕನ್ನಡದಲ್ಲಿ ವೀರಶೈವ ಕಾವ್ಯಗಳಲ್ಲಿ ಮಾತ್ರ 'ಷೋಡಶೋಪಚಾರ'ದ ಉಲ್ಲೇಖ ಬಂದಿರುವುದನ್ನು ಗಮನಿಸಿದರೆ ಇದು ವೀರಶೈವಕ್ಕೆ ವಿಶಿಷ್ಟವಾದ ಪರಿಕಲ್ಪನೆಯಿರಬಹುದೇ ಎಂಬ ಅನುಮಾನ ಬರುತ್ತದೆ.

=====

**ಸಾಮಾನ್ಯ:** ಇದು ಸಮಾನ ಎಂಬುದರಿಂದ ರೂಪಿತವಾದ ವಿಶೇಷಣ. 'ಎಲ್ಲಕ್ಕೂ ಅನ್ವಯಿಸುವ' ಎಂದು ಇದರರ್ಥ. "ಸಾಮಾನ್ಯವಾಚಿಗಳನೀ ತೆಱದಿಂದ" ಎಂಬ 'ಅಭಿಧಾನ ವಸ್ತುಕೋಶ'ದ ಮಾತಿನಲ್ಲಿ ಈ ಅರ್ಥವಿದೆ. 'ಸಾಮಾನ್ಯಂ ಸರ್ವಶಾಸ್ತ್ರೇಷು' ಎಂಬುದನ್ನು ದುರ್ಗಸಿಂಹನು 'ಪಂಚತಂತ್ರ'ದಲ್ಲಿ "ಎಲ್ಲಾ ಶಾಸ್ತ್ರಂಗಳಲ್ಲಿ ಸಾಧಾರಣಂ"ಎಂದು ಅನುವಾದಿಸುತ್ತಾನೆ."ಸಾವಾನ್ಯಜನಂಗಳನತಿಕ್ರಮಿಸಲೋಸ್ಕ ಮಾಗಿ ಅಳಿಪಿಲ್ಲದೆ ಉದ್ಯೋಗಂಗೆಯ್ವ ಮನುಷ್ಯರ ತೊಡೆ–ಯ ಮೇಲೆ ಲಕ್ಷ್ಮೀ ನೆಲಸಿಹಳು" ಎಂಬುದೂ ದುರ್ಗಸಿಂಹನ ಮಾತು. ಸಾಮಾನ್ಯನಿಯಮ, ಸಾಮಾನ್ಯಲಕ್ಷಣ ಮುಂತಾದ ಸಮಾಸಗಳಲ್ಲಿಯೂ ಇದು ಸ್ಫುಟವಾಗುತ್ತದೆ. ವಿಶೇಷವಲ್ಲದ್ದು ಸಾಮಾನ್ಯ. "ಯುಯು ಎಂಬುದು ಅಶ್ವಮೇಧದ ಹಯಮುಂ ಸಾಮಾನ್ಯ ಹಯಮುಮಕ್ಕುಂ" ಎಂಬುದೂ ಅಲ್ಲಿಯದೇ ವಿವರಣೆ. ಸಾಧಾರಣವಾದುದು ಎಂಬರ್ಥವೂ ಈ ಶಬ್ದಕ್ಕಿದೆ ("ಸಾವಭೃತಂ ಸಾಮಾನ್ಯಂ ಕೇವಳಂ" 'ಅಭಿಧಾನ ವಸ್ತುಕೋಶ'). "ಅಬ್ಜದಳಾಕ್ಷೀ ಪೇಟಿ ಸಾಮಾನ್ಯಮೇ ಬಗೆಯೆ ಭವತ್ಕೇಶಪಾಶಪ್ರಪಂಚಂ" ಎಂಬ ಮಾತಿನಲ್ಲಿಯೂ ಈ ಅರ್ಥವಿದೆ. 'ಸಾಮಾನ್ಯಮೇ' ಎಂಬುದು ಸಾಮಾನ್ಯವಲ್ಲ ಎಂಬುದನ್ನು ಧ್ವನಿಸುತ್ತದೆ. "ಸಾಮಾನ್ಯನಲ್ಲನಾತಂ ನೀಮಿದನವಧರಿಪುದು" ಎಂಬ ನೇಮಿನಾಥನ 'ಅರ್ಧನೇಮಿಪುರಾಣ'ದ ಮಾತಿನಲ್ಲಿ ಸಾಮಾನ್ಯ ಎಂಬುದಕ್ಕೆ ಸಾಮಾನ್ಯ ವ್ಯಕ್ತಿ ಎಂಬ ಅರ್ಥ ಹೊಮ್ಮುತ್ತದೆ. "ಸುಖಿಜಂಗಮ ಸಾಮಾನ್ಯ ಜಂಗಮ ಉಂಟೆ ಕೂಡಲಸಂಗಮದೇವ" ಎಂಬ ಬಸವಣ್ಣನ ಮಾತಿನಲ್ಲಿಯೂ ಈ ಅರ್ಥವಿದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾಧಾರಣ ಪ್ರಜೆಗೂ ಹೆಚ್ಚಿನ ಮೌಲ್ಯ ಪ್ರಾಪ್ತವಾದ ಕಾರಣ ಇಂಗ್ಲಿಷ್‌ನಲ್ಲಿ ಸಾಮಾನ್ಯ ಪ್ರಜೆಯನ್ನು 'ಮಿಸ್ಟರ್ ಕಾಮನರ್' ಎಂದು ಕರೆಯುವ ವಾಡಿಕೆ ಬಂತು. ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಶ್ರೀಸಾಮಾನ್ಯ' ಎಂದು ಬಳಸಿದವರು ಕುವೆಂಪು. "ಶ್ರೀ ಸಾಮಾನ್ಯರ ದೀಕ್ಷಾಗೀತೆ' ಎಂಬ ತಮ್ಮ ಕವನದಲ್ಲಿ ಅವರು "ಶ್ರೀಸಾಮಾನ್ಯನೆ ಭಗವತ್ ಮಾನ್ಯಂ ಶ್ರೀಸಾಮಾನ್ಯನೆ ಭಗವದ್ ಧನ್ಯಂ ಸಾಮಾನ್ಯತೆ ಭಗವಂತನ ರೀತಿ ಸಾಮಾನ್ಯತೆ ದಿಟ ಭಗವತ್ ಪ್ರೀತಿ" ಎಂದು ಹೇಳಿದರು. ಇಲ್ಲಿ ಕುವೆಂಪು ಸಾಮಾನ್ಯತೆ ಎಂಬ ಶಬ್ದವನ್ನೂ ರೂಪಿಸಿಕೊಂಡಿದ್ದಾರೆ. ಸಾಮಾನ್ಯ ಎಂಬುದರ ವಿರುದ್ಧಾರ್ಥಕವಾಗಿ ಅಸಾಮಾನ್ಯ ಎಂಬ ಪದವೂ ರೂಪಗೊಂಡಿದೆ. ಸಾಧಾರಣವಲ್ಲದ್ದು ಎಂಬುದು ಇದರರ್ಥ. "ಅಂದಾ ಮಹಿಮೆಯುತ್ಸವಮೆಂಬುದು ಅಸಾಮಾನ್ಯಂ ಅದೃಷ್ಟಂ ಅಪೂರ್ವಂ ಅಶ್ರುತಪೂರ್ವಂ" ಎಂಬುದು ಪೊನ್ನನ 'ಶಾಂತಿಪುರಾಣ'ದ ಮಾತು.

=====

# ಬಿಎಂಶ್ರೀ ಪ್ರತಿಷ್ಠಾನ ನಡೆದು ಬಂದ ದಾರಿ–೭

ಬಿ.ಆರ್. ರವೀಂದ್ರನಾಥ

ಆಗಸ್ಟ್ ೨೦೨೨ ಸಂಚಿಕೆಯಿಂದ

## ಪ್ರತಿಷ್ಠಾನವನ್ನು ಕಟ್ಟಿ ಬೆಳಸಿದ ಮಹನೀಯರು

ಶ್ರೀ ಡಿ.ವಿ.ಕೆ. ಮೂರ್ತಿ ಅವರು ಬಿಎಂಶ್ರೀ ಪ್ರತಿಷ್ಠಾನದ ಸ್ಥಾಪಕ ಸದಸ್ಯರಾಗಿದ್ದವರು. ಅವರ ಕಿರು ಪರಿಚಯವನ್ನು ಇಲ್ಲಿ ನೀಡಲಾಗಿದೆ.

### ಶ್ರೀ ಡಿ.ವಿ.ಕೆ. ಮೂರ್ತಿ



ಜನನ: ಮೇ ೩, ೧೯೨೬

ವಿದ್ವತ್ತು, ಓದಿನ ವಿಸ್ತಾರ, ದಟ್ಟ ಜೀವನಾನುಭವವಿರುವ, ನೂರಾರು ಪುಸ್ತಕಗಳನ್ನು ಪ್ರಕಟಿಸಿರುವ ಮೂರ್ತಿ ಅವರು ರಚಿಸಿರುವ ಕೃತಿಗಳು ಕೇವಲ ನಾಲ್ಕು. ಅವುಗಳಲ್ಲಿ ಒಂದು: ಮೆಕರೆಂಕೊ ಅವರ 'ಲರ್ನಿಂಗ್ ಟು ಲಿವ್' ಬೃಹತ್ ಕಾದಂಬರಿಯ ಕನ್ನಡ ಅನುವಾದ. ಉಳಿದ ಮೂರು ಕೃತಿಗಳಲ್ಲಿ ಒಂದು – ಪರದೆಯ ಹಿಂದೆ – ವಿಡಂಬನೆ. ಇನ್ನೊಂದು ನೀಳ್ಗತೆ (ವೆಂಕಪ್ಪಯ್ಯನ ಕೊನೆಯ ಅಕ್ಷರಗಳು) ಮೂರನೆಯದು, ಜೀವನ ಮೌಲ್ಯ ಮತ್ತು ಸಾಹಿತ್ಯ. ಈ ಕೊನೆಯ ಪುಸ್ತಕ ಮೌಲಿಕ ಸಾಹಿತ್ಯ ಮೀಮಾಂಸೆ, ಚಿಂತನೆ.

ಮುದ್ರಣ ಒಂದು ಮೋಹಕ ಕಲೆ, ಅಕ್ಷರ, ಪುಟ ವಿನ್ಯಾಸ, ಗುಣಾತ್ಮಕ ಮುದ್ರಣ – ಇಡೀ ಪುಸ್ತಕವೇ ಆಕರ್ಷಕ. ಈ ಪುಸ್ತಕಗಳನ್ನು ನೋಡಿದರೆ ಮೂರ್ತಿ ಅವರು ಪ್ರಕಾಶನವನ್ನು ಹೇಗೆ ತಮ್ಮ ಜೀವನ ಮೌಲ್ಯವಾಗಿ ಮಾಡಿಕೊಂಡಿದ್ದರು ಎಂಬುದು ಸ್ಪಷ್ಟವಾಗುತ್ತಿತ್ತು.

ಮೂರ್ತಿ ಅವರ ಕೌಟುಂಬಿಕ ಹಿನ್ನೆಲೆ ವೈದಿಕ ಮನೆತನದ್ದು. ಅವರ ತಂದೆ ಸಾಧಾರಣ ವ್ಯಕ್ತಿಯಾಗಿರಲಿಲ್ಲ. ಪಂಡಿತರತ್ನಂ ದೊಡ್ಡಬಳ್ಳಾಪುರ (ಕೋಲಾರ ಜಿಲ್ಲೆಯ ಬೇತಮಂಗಲದವರಾದ) ವಾಸುದೇವಾಚಾರ್ಯರೆಂದರೆ ಆ ಕಾಲಕ್ಕೆ ದೊಡ್ಡ ಹೆಸರು. ದಕ್ಷಿಣ ಭಾರತದ ಹೆಸರಾಂತ ಪಂಡಿತರ ಬಳಿ ಅವರು ನ್ಯಾಯ ವೇದಾಂತಗಳನ್ನು ಕಲಿತಿದ್ದರು. ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಮತ್ತು ಮಹಾರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. 'ಗೀತಭಾವ' (ಈ ಕೃತಿಯ ಪ್ರಕಾಶಕರು – ಡಿವಿಕೆ ಮೂರ್ತಿ ಅವರೇ) ಸೇರಿದಂತೆ ಕೆಲವು ಮಹತ್ವದ ಗ್ರಂಥಗಳನ್ನು ರಚಿಸಿದ್ದರು. ಈ ಹಿನ್ನೆಲೆಯಲ್ಲಿ ಸಹಜವಾಗಿಯೇ ಮೂರ್ತಿ ಅವರು ಬಾಲ್ಯದಲ್ಲಿಯೇ ಸಂಸ್ಕೃತದ ವೇದೋಪನಿಷತ್ತುಗಳನ್ನು ಅಧ್ಯಯನಮಾಡಿದರು. ಸ್ವತಂತ್ರ ಅಧ್ಯಯನದ ನಂತರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಕಾವ್ಯ ಪರೀಕ್ಷೆಯನ್ನು ಮಾಡಿಕೊಂಡರು. ಈ ಅವಧಿಯಲ್ಲಿಯೇ ಅವರಿಗೆ ಸಾಂಖ್ಯ ಲೋಕಾಯತ ತತ್ವಗಳ ಬಗ್ಗೆ ಆಸಕ್ತಿ ಮೂಡಿದ್ದು. ಮುಂದೆ ಮೂರ್ತಿ ಈ ತತ್ವಗಳನ್ನು ಆಳವಾಗಿ ಅಭ್ಯಾಸ ಮಾಡಿದರಲ್ಲದೆ ಇವುಗಳನ್ನೇ ತಮ್ಮ ಚಿಂತನೆಯ ತಳಹದಿಯನ್ನಾಗಿಯೂ ಮಾಡಿಕೊಂಡರು.

ಮೂರ್ತಿ ಅವರಿಗೆ ಪ್ರಕಾಶನ ಉದ್ಯಮ ಅನಿವಾರ್ಯವಾಗಿಯೇನೂ ಇರಲಿಲ್ಲ. ಅವರ ಆಸಕ್ತಿಯ ವಿಷಯ ಅರ್ಥಶಾಸ್ತ್ರ. ಅರ್ಥಶಾಸ್ತ್ರದಲ್ಲಿಯೇ ಅವರು ಬಿ.ಎ. (ಆನರ್ಸ್) ಪದವಿಯನ್ನು ಪಡೆದರು. ಚಿನ್ನದ ಪದಕವನ್ನೂ ಗಳಿಸಿದರು. ಪ್ರತಿಭಾವಂತ ತರುಣನಾದ ಈತ ತಮ್ಮ ವಿಭಾಗದಲ್ಲಿ ಅಧ್ಯಾಪಕನಾಗಿ ಇರಬೇಕೆಂಬುದು ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ. ವಿ.ಎಲ್.ಡಿಸೋಜಾ ಅವರ ಅಪೇಕ್ಷೆಯೂ ಆಗಿತ್ತು. ಇವರ ಉತ್ತರ ಪತ್ರಿಕೆಗಳ ಬಾಹ್ಯ ಮೌಲ್ಯಮಾಪಕರಾಗಿದ್ದ ಬೊಂಬಾಯಿ ವಿಶ್ವವಿದ್ಯಾನಿಲಯದ ಎಸ್.ಕೆ. ಮುರಂಜನ್ ಈ ಉತ್ತರಗಳನ್ನು ಬರೆದ ತರುಣನನ್ನು ಎಷ್ಟು ಮೆಚ್ಚಿಕೊಂಡಿದ್ದರೆಂದರೆ ಹೇಗಾದರೂ ಮಾಡಿ ಈ ಪ್ರತಿಭಾವಂತನನ್ನು ಸಂಶೋಧನೆಗೆ ತೊಡಗಿಸಬೇಕೆಂದು ಪ್ರಯತ್ನಿಸಿದರು. ಅರ್ಥಶಾಸ್ತ್ರದಲ್ಲಿ ಸಂಶೋಧನೆ ನಡೆಸುವಂತೆ ಪುಸಲಾಯಿಸಿದರು. ಅಗತ್ಯವಾದ ಶಿಷ್ಯವೇತನವನ್ನು ಕೊಡಿಸುವ ಭರವಸೆಯನ್ನೂ ನೀಡಿದರು. ಮುಂದೆ ಪ್ರಾಧ್ಯಾಪಕ ಹುದ್ದೆ ತಾನೇ ತಾನಾಗಿ ದೊರೆಯುತ್ತದೆಂಬ ಮಾತನ್ನೂ ಆಡಿದರು. ಆದರೆ ಮೂರ್ತಿ ಅವರಿಗೆ ಅದು ಯಾವುದೂ ಆಕರ್ಷಕವಾಗಿ ಕಾಣಿಸಲಿಲ್ಲ. ಬಿ.ಎ. ಮುಗಿದ ನಂತರ ತಾವೇನು ಮಾಡಬೇಕು ಎಂಬುದನ್ನು ಮೂರ್ತಿ ಆ ವೇಳೆಗಾಗಲೇ ನಿರ್ಧರಿಸಿಬಿಟ್ಟಿದ್ದರು.

ಅದಕ್ಕೆ ಹಿನ್ನೆಲೆಯೂ ಇತ್ತು. ತಮ್ಮ ಹನ್ನೊಂದನೇ ವಯಸ್ಸಿನಿಂದಲೇ ಮೂರ್ತಿ ತಮ್ಮ ಬಂಧುಗಳೇ ನಡೆಸುತ್ತಿದ್ದ 'ಮಾಧವ ಅಂಡ್ ಸನ್ಸ್' ಮತ್ತು 'ಆನಂದ್ ಬ್ರದರ್ಸ್' ಸಂಸ್ಥೆಗಳ ವಹಿವಾಟಿನಲ್ಲಿ ಆಸಕ್ತಿ ತೋರಿಸಿದ್ದರು. ಆ ಸಂಸ್ಥೆಗಳು ಪ್ರಕಟಿಸಿದ್ದ ಪುಸ್ತಕಗಳ ಮಾರಾಟ ಮೊದಲಾದ ವ್ಯವಹಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಯಾರ ಹಂಗೂ ಇಲ್ಲದೆ, ತಮಗನಿಸಿದ ರೀತಿಯಲ್ಲಿ ಬದುಕಬೇಕಾದರೆ ತಮ್ಮದೇ ಆದ ಉದ್ಯಮವನ್ನು ಸೃಷ್ಟಿಸಿಕೊಳ್ಳಬೇಕೆಂಬ ನಿರ್ಧಾರ ಅವರಲ್ಲಿ ಮೂಡಿತ್ತು. ಬಿ.ಎ. ಮುಗಿಸುವ ವೇಳೆಗ ಮೂರ್ತಿ ಅವರಿಗೆ ತಮ್ಮ ದಾರಿ ಸ್ಪಷ್ಟವಾಗಿ ಕಾಣಿಸಿತ್ತು. ಅವರು ಎಲ್ಲಿಯೂ ಹೋಗದೆ, ಮೈಸೂರಿನಲ್ಲಿಯೇ ನೆಲೆ ನಿಂತು ಪ್ರಕಾಶನ ಸಂಸ್ಥೆಯನ್ನು ಆರಂಭಿಸಿದರು. ಆರಂಭದ ದಿನಗಳಲ್ಲಿ ಮೂರ್ತಿ ಕಾಗದ, ಲೇಖನ ಸಾಮಗ್ರಿಗಳ ಮಾರಾಟಕ್ಕೆ ತೊಡಗಿ ನಂತರ ಪ್ರಕಾಶನ ಸಂಸ್ಥೆಯನ್ನು ಆರಂಭಿಸಿದ್ದು ಕನ್ನಡ ಸಾರಸ್ವತ ಲೋಕಕ್ಕೆ ಮಹತ್ವದ ಕೊಡುಗೆಯಾಯಿತು.

*

### ದತ್ತಿದಾನಿಗಳ ವಿವರ

#### ಶ್ರೀಮತಿ. ರಂಗನಾಯಕಮ್ಮ–ಶ್ರೀ ಜಿ.ಸುಬ್ಬರಾವ್ ನೆನಪಿನ ಸಂಗೀತ ಕಾರ್ಯಕ್ರಾಮಕ್ಕಾಗಿ ದತ್ತಿ ನಿಧಿ.

೧೯೧೨ ಅಕ್ಟೋಬರ್ ೧೦ರಂದು ಜನಿಸಿದ ದಿವಂಗತ ಶ್ರೀ ಜಿ. ಸುಬ್ಬರಾವ್ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ತಮ್ಮ ಸ್ನಾತಕ ಪದವಿಯನ್ನು ಪಡೆದು, ಕರ್ನಟಕ ಸರ್ಕಾರದ ಸಚಿವಾಲಯದಲ್ಲಿ ಸೇವೆಸಲ್ಲಿಸಿ, ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ೧೯೬೬ರಲ್ಲಿ ನಿವೃತ್ತಿಹೊಂದಿದರು. ಶಿಸ್ತಿನ ದಿನಚರಿ ಮತ್ತು ಸಮಯ ಪ್ರಜ್ಞೆಯನ್ನು ಬಹಳ ಕಟ್ಟುನಿಟ್ಟಿನಿಂದ ಪಾಲಿಸುತ್ತಿದ್ದರೆಂಬ ಖ್ಯಾತಿ ಇವರದ್ದು. ಈ ದಂಪತಿಗಳ ಹಿರಿಯ ಮಗಳಾದ ಶ್ರೀಮತಿ. ಸುನಂದ (೧೬ಮೇ ೧೯೪೨) ತಮ್ಮ ವಿದ್ಯಾಭ್ಯಾಸದ ನಂತರ ಸಂಗೀತವನ್ನು ದಿವಂಗತ. ಡಿ.ಸುಬ್ಬರಾಮಯ್ಯನವರ ಬಳಿ ವಿದ್ಯಾರ್ಥಿಯಾಗಿ ಅಭ್ಯಾಸ ಮಾಡಿ, ಹಲವಾರು ಪ್ರಶಸ್ತಿ ಮತ್ತು ಬಹುಮಾನಗಳನ್ನು ಪಡೆದಿದ್ದಾರೆ.

ಶ್ರೀಮತಿ ಸುನಂದ ಅವರು ತಮ್ಮ ಮಾತಾಪಿತೃಗಳ ನೆನಪಿನಲ್ಲಿ ಜನವರಿಯಲ್ಲಿ ಒಂದು ದಿನ ಸಂಜೆ ಸಂಗೀತ ಕಾರ್ಯಕ್ರಮವನ್ನು ಆಯೋಜಿಸಲೆಂದು ಒಂದು ದತ್ತಿ ನಿಧಿಯನ್ನು ಸ್ಥಾಪಿಸಿದ್ದಾರೆ.

### ಶ್ರೀ ಕೆ.ಮೋಹನ್ ದೇವ್ ಆಳ್ವ– ಡಾ.ಎಂ.ಕೆ. ಶೈಲಜಾ ಆಳ್ವ ಸಂಗೀತ ಸ್ಪರ್ಧೆ

#### ಶ್ರೀ ಕೆ. ಮೋಹನ್ ದೇವ್ ಆಳ್ವ

ಆಚಾರ್ಯ ಪಾಠಶಾಲಾ ಶಿಕ್ಷಣದತ್ತಿಯ ಟ್ರಸ್ಟಿ ಮತ್ತು ಮೆಂಟಾರ್, ಬೆಂಗಳೂರು ಗಾಯನ ಸಮಾಜದ ಟ್ರಸ್ಟಿ, ಶ್ರೀ ಕಂಠೀರವ ಫಿಲ್ಮ್ ಸ್ಟೂಡಿಯೋದ ನಿರ್ದೇಶಕರು. ಈ ಹಿಂದೆ ಭಾರತ ಫ್ರಾನ್ಸ್ ಸಾಂಸ್ಕೃತಿಕ ಸಂಘ, ಬೆಂಗಳೂರು, ಕರ್ನಾಟಕ ವಲಯದ ಅಧ್ಯಕ್ಷರು, ಬೆಂಗಳೂರು ಮಹಾನಗರ ಪಾಲಿಕೆಯ ಕಾರ್ಪೊರೇಟರ್ ಮತ್ತು ಭಾರತ ಸರ್ಕಾರದ ಫಿಲ್ಮ್ ಸೆನ್ಸಾರ್ ಬೋರ್ಡಿನ ಕರ್ನಾಟಕ ವಲಯದ ಸದಸ್ಯರು ಆಗಿದ್ದರು.

#### ಡಾ॥ ಎಂ.ಕೆ. ಶೈಲಜಾ ಆಳ್ವ

ಇವರು ಮಕ್ಕಳ ತಜ್ಞರು. ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ಸೀನಿಯರ್ ಸ್ಪೆಷಲಿಸ್ಟ್ ಆಗಿದ್ದರು. ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ರಕ್ತನಿಧಿ (ಬ್ಲಡ್ ಬ್ಯಾಂಕ್)ಗಳನ್ನು ಸ್ಥಾಪಿಸಿ, ಬೆಳೆಸುವಲ್ಲಿ ಹೆಚ್ಚಿನ ಕಾರ್ಯವನ್ನು ಮಾಡಿದ್ದರು.



# ಎಂ.ವಿ.ಸೀ.
# ಬದುಕು ಬರಹ – ೩೦

– ಡಾ. ಪಿ.ವಿ. ನಾರಾಯಣ

ಹಿಂದಿನ ಸಂಚಿಕೆಯಿಂದ

ಎಂವಿಸೀ ಉತ್ತಮ ವ್ಯಕ್ತಿಚಿತ್ರಗಳನ್ನೂ ಬರೆದಿದ್ದಾರೆ; ಅವೆಲ್ಲ ಬೇರೆಬೇರೆಡೆ ಪ್ರಕಟವಾಗಿದ್ದವು. ಅವರು ತೀರಿಕೊಂಡ ಮೇಲೆ ೧೯೯೦ ರಲ್ಲಿ ಚೆದುರಿಹೋಗಿದ್ದ ಹನ್ನೊಂದು ವ್ಯಕ್ತಿಚಿತ್ರಗಳನ್ನು ಒಟ್ಟಾಗಿಸಿ 'ಪ್ರತಿಮಾಗೃಹ' ಎಂಬ ಹೆಸರಿನಲ್ಲಿ ಪ್ರಕಟಿಸಲಾಗಿದೆ. ಸಂಕಲನದ ಹೆಸರು ಸಹಜವಾಗಿಯೇ ಭಾಸ ಕವಿಯ 'ಪ್ರತಿಮಾ' ನಾಟಕದಲ್ಲಿನ ಪ್ರತಿಮಾಗೃಹವನ್ನು ನೆನಪಿಗೆ ತರುತ್ತದೆ. ದಶರಥ ಸತ್ತಾಗ ಮಾವನ ಮನೆಯಿಂದ ಬರುವ ಭರತ ಅಯೋಧ್ಯೆಯನ್ನು ಹೊಗುವ ಮುನ್ನ ಊರ ಹೊರಗಿನ ಉಪವನದಲ್ಲಿ ಸುತ್ತಾಡುವ ಪ್ರಸಂಗ ಬರುತ್ತದೆ; ಅಲ್ಲಿರುವುದೆಲ್ಲ ತೀರಿಕೊಂಡವರ ಪ್ರತಿಮೆಗಳು; ಅಲ್ಲಿ ದಶರಥನ ಪ್ರತಿಮೆಯೂ ಇರುವುದನ್ನು ಕಂಡು ಭರತನಿಗೆ ನಡೆದಿರುವುದೇನು ಎಂದು ತಟ್ಟನೆ ತಿಳಿಯುತ್ತದೆ. ಅಂತೆಯೇ ಇಲ್ಲಿನ ಬರಹಗಳಿಗೆ ವಸ್ತುಗಳಾದವರೆಲ್ಲ ಹಿರಿಯರು, ಲೇಖ–ಕರ ದೃಷ್ಟಿಯಲ್ಲಿ ಆದರ್ಶ ಜೀವಿಗಳು (ರೋಲ್ ಮಾಡೆಲ್‌ಗಳು). ಇಲ್ಲಿನ ಹನ್ನೊಂದರಲ್ಲಿ ಒಂದನ್ನುಳಿದು ಮಿಕ್ಕವೆಲ್ಲ ಸಾಹಿತಿಗಳದು; ಹನ್ನೊಂದನೆಯದೆಂದರೆ ಚಿತ್ರಶಿಲ್ಪಿ ವೆಂಕಟಪ್ಪನವರದು. ಮಿಕ್ಕವರೆಲ್ಲ ಎಂವಿಸೀ ಅವರಿಗೆ ತುಂಬ ಹತ್ತಿರದಿಂದ ಪರಿಚಯವಿದ್ದವರು. ಕೆಲವರು ನೇರವಾಗಿ ಅವರಿಗೆ ಪಾಠ ಹೇಳಿದ ಗುರುಗಳು; ಮತ್ತೆ ಕೆಲವರು ಗುರುಸಮಾನರು; ಒಂದಿಬ್ಬರು ಓರಗೆಯವರು. ಸಾಮಾನ್ಯವಾಗಿ ಯಾರ ವ್ಯಕ್ತಿಚಿತ್ರ ರಚನೆಗೆ ತೊಡಗುತ್ತಾ–ರೋ ಮೊದಲಲ್ಲಿ ಅವರ ಹೊರನೋಟದ ವರ್ಣನೆಯನ್ನು ರೇಖಾಚಿತ್ರದಂತೆ ಮೂಡಿಸುವುದು ಎಂವಿಸೀ ಅವರ ಕ್ರಮ; ಅವರು ಚಿತ್ರಕಲೆಯಲ್ಲಿ ಆಸಕ್ತಿ ಮಾತ್ರವಲ್ಲದೆ, ಪರಿಶ್ರಮವನ್ನು ಹೊಂದಿದ್ದುದೂ ಇದಕ್ಕೆ ಕಾರಣ. ಅಚ್ಚಾದ ಪುಸ್ತಕದಲ್ಲಿ ಅವರೇ ರಚಿಸಿದ ಕೆಲವರ ರೇಖಾಚಿತ್ರವನ್ನೂ ಮುದ್ರಿಸಲಾಗಿದೆ. ಉಳಿದಂತೆ ಅವರ ಭಾವಚಿತ್ರವನ್ನು ನೀಡಿದೆ. ಗೋವಿಂದ ಪೈ ಅವರ ರೇಖಾಚಿತ್ರ ವರ್ಣನೆ ಹೀಗಿದೆ: ".. ಅವರದು ಸ್ಥೂಲ ಶರೀರ, ಸ್ಥೂಲತೆಗೆ ತಕ್ಕ ಎತ್ತರ; ಎತ್ತರಕ್ಕೆ ತಕ್ಕ ದುಂಡು ಮುಖ, ಮುಖದ ಮಾಟಕ್ಕೆ ತಕ್ಕ ತುಂಬುಗೆನ್ನೆ, ಅಗಲವಾದ ಹಣೆ; ಹಣೆಯ ಅಂಚಿನಲ್ಲಿ ತೂಗುವ ತುರುಗಲು ಹುಬ್ಬು; ಮುಂದಕ್ಕೆ ಚಾಚಿದ ಗೆಡ್ಡೆ ಮೂಗು; ಮೇಲ್ತುಟಿಯನ್ನು ಮುಚ್ಚಲೆಳಸುವ, ಉಬ್ಬಿಬಾಗಿದ ಮೀಸೆ, ಉಪ್ಪುಮೆಣಸು ಬೆರಸಿದ ಬಣ್ಣದ್ದು: 'ಕ್ರಾಪು' ಕತ್ತರಿಸಿದ ನರೆತ ಕೂದಲಿನ ದಪ್ಪತಲೆಯ ಮೇಲೆ ಸಣ್ಣದಾಗಿ ಕಾಣುವ ಬಿಳಿಯ ಖಾದಿ ಟೊಪ್ಪಿಗೆ; ಗುಜ್ಜು ಕೊರಳು. ಉಬ್ಬಿದ ಎದೆ; ತೊಟ್ಟದ್ದು ಉಟ್ಟದ್ದು ಒರಟು ಖಾದಿ ಬಟ್ಟೆಯ ಬನೀನು ಜುಬ್ಬ ಇಲ್ಲವೆ ಮೋಟು ಷರಟು." ಹೀಗೆ ಬಣ್ಣಿಸಿಯಾದ ಮೇಲೆ ತಮ್ಮ ಮತ್ತು ತಮ್ಮ ನಾಯಕರ ನಡುವಣ ಸಂಬಂಧದ ಸ್ವರೂಪ ಪರಿಚಯ, ಅವರ ಸ್ವಭಾವ, ವಿಶಿಷ್ಟತೆ, ಅವರ ಕೆಲಸದ ಹಿರಿಮೆಗರಿಮೆ ಇತ್ಯಾದಿಗಳು ಬಣ್ಣನೆಗೊಂಡಿವೆ. ಒಂದು ರೀತಿಯಲ್ಲಿ ಈ ವ್ಯಕ್ತಿಚಿತ್ರಗಳ ಭಾಷೆ ಶೈಲಿ ಹಾಗೂ ವರ್ಣನೆಗಳ ಮೂಲಕ ಎಂವಿಸೀ ಮತ್ತವರ ನಾಯಕರ ನಡುವಣ ಸಂಬಂಧದ ಆಳವನ್ನು ಗುರುತಿಸಲು ಸಾಧ್ಯ; ಸ್ವಲ್ಪ ಮಟ್ಟಿಗೆ ಲೇಖನದ ದೀರ್ಘತೆಯೂ ಅದನ್ನು ತೋರಿಸುತ್ತದೆ. ಇಲ್ಲಿನ ಲೇಖನಗಳಲ್ಲೆಲ್ಲ ವೆಂಕಣ್ಣಯ್ಯ ಮತ್ತು ತೀನಂಶ್ರೀ ಅವರ ಬಗೆಗಿನ ಲೇಖನಗಳು ಹೆಚ್ಚು ದೀರ್ಘವಾದವು. ಅದಕ್ಕನುಗುಣವಾಗಿ ಅವರಿಬ್ಬರ ಜೊತೆಯೇ ಎಂವಿಸೀ ಅವರ ಒಡನಾಟ ಹೆಚ್ಚಾಗಿದ್ದುದು. ಇಲ್ಲಿರುವವರೆಲ್ಲರೂ ಅವರಿಗೆ ಪೂಜ್ಯರೇ; ಆದರೆ ವೆಂಕಣ್ಣಯ್ಯನವರ ಬಗ್ಗೆ ಲೇಖನ ಆರಂಭವಾಗುವುದೇ "ನನ್ನ ಪರಮ ಪೂಜ್ಯ ಗುರು" ಎಂದು, ಜೊತೆಗೆ ಲೇಖನದ ಶೀರ್ಷಿಕೆಯೂ 'ಗುರುವಿನ ಒಂದು ಭಾವಚಿತ್ರ' ಎಂಬುದು. "ನನ್ನ ಮುಖ ಎತ್ತಿದಲ್ಲದೆ ಅವರ ಮುಖ ಕಣ್ಣಿಗೆ ಬೀಳುತ್ತಿರಲಿಲ್ಲ" ಎಂದು ಸಾಂಕೇತಿಕವಾಗಿ ಹೇಳುವ ಅವರು ಲೇಖನದುದ್ದಕ್ಕೂ ವೆಂಕಣ್ಣಯ್ಯನವರು ತಮಗೆ ಮಾರ್ಗದರ್ಶನ ಹಾಗೂ ಸಹಾಯಗಳನ್ನು ಮಾಡಿದ ಬಗೆಯನ್ನು ಮನದುಂಬಿ ನೆನೆಸಿಕೊಳ್ಳುತ್ತಾರೆ. ತಮ್ಮ ಓದು ಸಾಗಿದ್ದು, ಚಿತ್ರಕಲೆಯಲ್ಲಿ ಆಸಕ್ತಿ ಕೆರಳಿಸಿದ್ದು, ವೆಂಕಟಪ್ಪನವರ ಶಿಷ್ಯವೃತ್ತಿಗೆ ಶಿಫಾರಸು ಮಾಡಿದ್ದು, ಚಿತ್ರಕಲೆಯ ಅಭ್ಯಾಸಕ್ಕೆ ಶಾಂತಿನಿಕೇತನಕ್ಕೆ ಹೋಗಲು ಉತ್ತೇಜಿಸಿದ್ದು – ಹೀಗೆ "ತಮ್ಮ ಶಿಷ್ಯರಲ್ಲಿ ಅಡಗಿಕೊಂಡಿದ್ದ ಸಹಜ ಶಕ್ತಿಸಾಮರ್ಥ್ಯಗಳನ್ನು, ಪ್ರತಿಭಾವಿಶೇಷಗಳನ್ನು ಗುರುತಿಸಿ ಅವುಗಳ ಹೊರಹೊಮ್ಮುಗೆಗೆ ತಕ್ಕ ವಾತಾವರಣವನ್ನು ಕಲ್ಪಿಸಿ"ಕೊಡುತ್ತಿದ್ದ ಬಗೆ ಇವನ್ನೆಲ್ಲ ಲೇಖಕರು ಎದೆಯಾಳದಿಂದ ಬಣ್ಣಿಸುತ್ತಾರೆ. ಲೇಖನದ ಕೊನೆಯ ಸಾಲುಗಳು ಹೃದಯ ಕಲಕುವಂತಿವೆ: "ಉನ್ನತರಾದ, ಉದಾತ್ತರಾದ, ಪೂಜ್ಯ ವೆಂಕಣ್ಣಯ್ಯನವರ ಶಿಷ್ಯಪರಂಪರೆಯ ಕೊನೆಯ ಸಾಲಿನ ಕೊಟ್ಟ ಕೊನೆಯ ಕಿರಿಯ ಶಿಷ್ಯ ನಾನು. ಅವರ ಹೆಗಲೆಣೆಯಾಗಿ ನಿಂತವನಲ್ಲ, ನಿಲ್ಲಬಯಸಿದವನೂ ಅಲ್ಲ. ನನ್ನ ಪರಮಲಕ್ಷ್ಯ, ನನಗೆ ನಿಲುಕಿದ್ದು, ಅವರ ಅಡಿದಾವರೆಯ ದರ್ಶನ–ಅಂದು ನಿಜದಲ್ಲಿ, ಇಂದು ನೆನಪಿನಲ್ಲಿ."

ಅಂತೆಯೇ ತಮಗೆ ವಯಸ್ಸಿನಲ್ಲಿ ಬಹಳವೇನೂ ಹಿರಿಯರಾಗದಿದ್ದರೂ ಎಲ್ಲ ಹಂತದಲ್ಲಿಯೂ ತಮಗೆ ಮಾರ್ಗದರ್ಶನ ಮಾಡಿದ ತೀನಂಶ್ರೀ ಅವರ ಬಗೆಗೂ ಅವರಿಗೆ ಅಪಾರ ಗೌರವ. ಅವರನ್ನು 'ಸ್ನೇಹಮೂರ್ತಿ' ಎಂದು ಕರೆಯುತ್ತಾರೆ. "ಅವರು ನನ್ನ ಹಿರಿಯ ಗೆಳೆಯ, ಹಿರಿಯಣ್ಣ, ಹಿತೈಷಿ, ಗುರು, ಬಂಧು–ಎಲ್ಲವೂ", "ತೀನಂಶ್ರೀ ಬಹು ಸರಳಜೀವಿ, ಸರಳ ಎಂದರೆ ನೀರಸವಲ್ಲ", ಮುಂತಾಗಿ ವರ್ಣಿಸುವ ಬಗೆಯಲ್ಲಿ ಅವರಿಬ್ಬರ ನಡುವಣ ತಿಳಿವಳಿಕೆ ಎಂಥದು ಎಂಬುದು ಅರಿವಿಗೆ ಬರುತ್ತದೆ. ಅವರ ಅಚ್ಚುಕಟ್ಟು, ಹೊರರೂಪುಗಳನ್ನು ವಿವರಿಸುವ ಬಗೆ, ತೀನಂಶ್ರೀ ಅವರ ವಿಮರ್ಶೆಯ ನೈಷ್ಠುರ್ಯ, ರಸಿಕ ಮನೋಭಾವ ಇವುಗಳನ್ನೆಲ್ಲ ಸ್ಫುಟವಾಗಿ ಚಿತ್ರಿಸುತ್ತಾರೆ. ಬಿಎಂಶ್ರೀ ಮತ್ತು ಡಿವಿಜಿ ಅವರ ಜೊತೆ ಎಂವಿಸೀ ಅವರಲ್ಲಿ ಹೆಚ್ಚಿನ ಸಲುಗೆಗೆ ಅವಕಾಶವಿರಲಿಲ್ಲ; ಆದರೆ ಸಾಕಷ್ಟು ಒಡನಾಟವಿತ್ತು. ಬಿಎಂಶ್ರೀ ಅವರು ಹೊಸಕಾವ್ಯವನ್ನು ಪರಿಚಯಿಸುತ್ತಿದ್ದ ರೀತಿ, ಬೆಂಗಳೂರಿನಲ್ಲಿ ಇಂಗ್ಲಿಷ್ ಪ್ರಾಧ್ಯಾಕರಾಗಿದ್ದರೂ ಗೌರವ ಕನ್ನಡ ಪ್ರಾಧ್ಯಾಪಕರಾಗಿ ಮೈಸೂರಿಗೆ ಬಂದು ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ 'ಪಾಠಪ್ರವಚನ ಸಪ್ತಾಹ'ವನ್ನು ನಡೆಸಿಕೊಡುತ್ತಿದ್ದ ವೈಖರಿ – ಒಂದು ವಾರ ಪೂರ್ತಿ,

ದಿನಕ್ಕೆ ಕನಿಷ್ಟಪಕ್ಷ ಐದು ಗಂಟೆಗಳ ಕಾಲ ಮಾಡುತ್ತಿದ್ದ ಪಾಠಗಳು – ಕನ್ನಡಕ್ಕೆ ಅವರು ನೀಡಿದ ಕೊಡುಗೆಯನ್ನು "ಹಳಗನ್ನಡದ ನಾಡೋಜ ಪಂಪ; ಹೊಸಗನ್ನಡದ ನಾಡೋಜ, ಬಿಎಂಶ್ರೀ" ಎಂದು ಸಂಕ್ಷೇಪವಾಗಿ ಹೇಳುವ ಬಗೆ – ಬಿಎಂಶ್ರೀ ಅವರ ವಿದ್ವತ್‌ಕಾರ್ಯದ ಸ್ವರೂಪವನ್ನು ಪರಿಚಯಿಸುತ್ತದೆ (ಬಿಎಂಶ್ರೀ ಅವರ ಬಗೆ ಎಂವಿಸೀ ಅವರೇ ಇತರತ್ರ ನಾಲ್ಕಾರು ಲೇಖನಗಳನ್ನು ಬರೆದಿದ್ದಾರೆ). ಹಾಗೆಯೇ ತಾವು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದ ಕಾಲದಲ್ಲಿ ಅದರ ಉಪಾಧ್ಯಕ್ಷರಾಗಿದ್ದ ಡಿವಿಜಿ ಅವರ ಮುಂಗೋಪ, ಕಠಿಣ ನಡವಳಿಕೆ, ಆದರೆ "ಹಲಸಿನ ಹಣ್ಣಿನ ಮೈಮೇಲೆ ಮುಳ್ಳು ಉಂಟು; ಮುಟ್ಟಲು ಒರಟು, ಆದರೆ ಅದು ಗೊಬ್ಬಳಿ ಮುಳ್ಳಲ್ಲ; ಒಳಗಿನ ತೊಳೆ ಎಷ್ಟು ಮಧುರ!" ಎಂದು ಅವರ ಸ್ವಭಾವವನ್ನು ಚಿತ್ರಿಸುವ ಪರಿ; ಎಆರ್‌ಕೃ ಅವರ ಹೇಳದೆ ಮಾಡುವ ಉಪಕಾರಮನೋಭಾವ, 'ಕಲಾತಪಸ್ವಿ' ವೆಂಕಟಪ್ಪನವರ ನಿಷ್ಠುರ ಶಿಸ್ತು, ಅವರ ಬಣ್ಣಗಾರಿಕೆಯ ವೈಶಿಷ್ಟ್ಯ; ಬೇಂದ್ರೆಯವರನ್ನು 'ಚಾರಣಕವಿ' ಎಂದು ಕರೆದು, ಅವರ ಕವನದ ಓದುಗಾರಿಕೆಯನ್ನು "ಅವರ ಕಾವ್ಯಕ್ಕೆ ಒಂದು ಜೀವಂತ ಆಕಾರ ಕೊಟ್ಟದ್ದು ಅವರ ಕಂಠ, ಅಚ್ಚಿನ ಮನೆ ಅಲ್ಲ; ಅವರಿಗೆ ಜನಪ್ರೇಮವನ್ನು ಸಂಪಾದಿಸಿ ಕೊಟ್ಟದ್ದು ಓದುಗರ ಕಣ್ಣಲ್ಲ, ವಿಮರ್ಶಕರ ವಿವೇಕ ಅಥವಾ ಅವಿವೇಕ ಅಲ್ಲ, ಕೇಳುಗರ ಕಿವಿ, ಬಿಚ್ಚಿದ ಮನಸ್ಸು, ತೆರೆದ ಹೃದಯ" ಮುಂತಾಗಿ ತಮ್ಮ ಅಭಿಪ್ರಾಯವನ್ನು ಮನದಟ್ಟು ಮಾಡುವ ಬಗೆ; ಮಾಸ್ತಿಯವರ ಔದಾರ್ಯ, "ಈ ಸಂಶೋಧನೆ, ಅನ್ವೇಷಣೆ ಎನ್ನುವುದು ಹೆಗ್ಗಣ ಬಿಲ ತೋಡಿದ ಹಾಗೆ" ಎಂದು ನವಿರಾಗಿ ತಮ್ಮ ಅಭಿಪ್ರಾಯ ಹೇಳುವ ರೀತಿ; ವಿಸೀ ಅವರ ಹೊರರೂಪಿಗೆ ಅನುಗುಣವಾದ ಆಂತರಿಕ ಅಚ್ಚುಕಟ್ಟು. ರಾಜರತ್ನಂ ಅವರ ಒಡನಾಟ, ಅವರ ಕೃತಿಗಳಿಗೆ ನಿಡುಗಾಲ ರೇಖಾಚಿತ್ರಗಳನ್ನು ಬರೆದುಕೊಟ್ಟು ಸಂಭಾವನೆಯನ್ನು ಪಡೆದೂ ವ್ಯಾವಹಾರಿಕವಾಗದ ತಮ್ಮಿಬ್ಬರ ಸ್ನೇಹ – ಇವನ್ನೆಲ್ಲ ಎಂವಿಸೀ ಮನೋಜ್ಞವಾಗಿ ಚಿತ್ರಿಸುತ್ತಾರೆ. (ಮುಂದುವರೆಯುವುದು)




**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023 dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-12-2022**


## ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಸ್ಮಾರಕ ದತ್ತಿ

ಸಾಹಿತ್ಯ– ಸಂಸ್ಕೃತಿಪ್ರಿಯರಾದ ದಿ॥ ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಅವರ ಸ್ಮರಾಣಾರ್ಥವಾಗಿ ಪ್ರತಿವರ್ಷ ಜನವರಿ ತಿಂಗಳಲ್ಲಿ ಗಮಕ ವಾಚನ ಮತ್ತು ವ್ಯಾಖ್ಯಾನ ಕಾರ್ಯಕ್ರಮವನ್ನು ಏರ್ಪಡಿಸಬೇಕೆಂದು ಶ್ರೀಮತಿ ಬಿ.ಜಿ.ಕುಸುಮ ಮತ್ತು ಒಡಹುಟ್ಟಿದವರು ಸೇರಿ ಈ ದತ್ತಿ ಸ್ಥಾಪನೆಯನ್ನು ಸ್ಥಾಪಿಸಿದ್ದಾರೆ.

ದಿ. ಶ್ರೀಮತಿ ಬಿ.ಜಿ.ಕುಸುಮ
ಜನನ ೧೯೩೩ – ನಿಧನ ಸೆಪ್ಟಂಬರ್ ೨೦೨೧
ವಿಜ್ಞಾನ ಶಿಕ್ಷಣದಲ್ಲಿ ಅತೀವ ಶ್ರದ್ಧೆ ಮತ್ತು ಕಲೆಯಲ್ಲಿ ಅಪಾರ ಆಸಕ್ತಿ ಇವೆರಡರ ಸಾಂಗತ್ಯಕ್ಕೆ ಬಿ.ಜಿ.ಕುಸುಮಾ ಅವರ ವ್ಯಕ್ತಿತ್ವವೇ ಒಂದು ಉತ್ತಮ ಉದಾಹರಣೆ. ದಿ. ಬಿ.ಜಿ.ಕುಸುಮಾ ಅವರು ಇಪ್ಪತ್ತೈದು ವರ್ಷಗಳ ಕಾಲ ಮಕ್ಕಳಿಗೆ ಬೇಸಿಗೆ ವಿಜ್ಞಾನ ಶಿಬಿರಗಳನ್ನು ನಡೆಸಿದ್ದರು. ನಾಳೆಯ ಪೀಳಿಗೆಯಲ್ಲಿ ವೈಜ್ಞಾನಿಕ ಮನೋಭಾವವನ್ನು ಬಿತ್ತುವ ಹಂಬಲ ಹೊಂದಿದ್ದರು. ಹಾಗೆಯೇ ಪ್ರಸಿದ್ಧ ಗಮಕಿಗಳ ಕಾವ್ಯವಾಚನಕ್ಕೆ ವ್ಯಾಖ್ಯಾನ ಮಾಡುವ ಆಸಕ್ತಿ ಹೊಂದಿದ್ದರು. ಶಿಕ್ಷಕಿ, ಸಂಘಟಕಿ, ವಿಜ್ಞಾನ ಪ್ರಚಾರಕಿ, ಸಾಮಾಜಿಕ ಕಾರ್ಯಕರ್ತೆ ಮತ್ತು ಕಾವ್ಯವಾಚನ ವ್ಯಾಖ್ಯಾನಕಾರ್ತಿ ದಿ.ಕುಸುಮಾ ಅವರು ಸದಾ ಜನರ ಒಳಿತನ್ನು ಬಯಸುತ್ತಿದ್ದರು. ಬಡ ಹೆಣ್ಣುಮಕ್ಕಳ ಶಿಕ್ಷಣಕ್ಕೆ, ಮಹಿಳೆಯರ ಆರೋಗ್ಯ ರಕ್ಷಣೆಗೆ ಸ್ಪಂದಿಸಲೆಂದೇ ಅವರು ಒಂದು ಸಾಮಾಜಿಕ ಸೇವಾ ಟ್ರಸ್ಟ್ ಸ್ಥಾಪಿಸಿದ್ದಾರೆ. ವಿಜ್ಞಾನ ವಿಷಯಗಳನ್ನು ಕುರಿತು ಸರಳ ಭಾಷೆಯಲ್ಲಿ ಲೇಖನಗಳನ್ನು ಬರೆಯುತ್ತಿದ್ದ ಅವರು ಕನ್ನಡ ಮಹಾಕಾವ್ಯಗಳ ರಸಪ್ರಸಂಗಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಮಕ್ಕಳ ಕಥೆಗಳ ಅವರ ಎರಡು ಸಂಗ್ರಹಗಳು, ಬದುಕಿಗೆ ಬೇಕಾದ ಸಂಗತಿಗಳನ್ನು ತಿಳಿಸಿಕೊಡುತ್ತವೆ. ಕುಸುಮಾ ಅವರ ಬಹುಮುಖ ಆಸಕ್ತಿಗೆ 'ವ್ಯಾಖ್ಯಾನ ವಿಶಾರದೆ' ಬಿರುದು, ಗಾರ್ಗಿ ಪ್ರಶಸ್ತಿ ಮತ್ತು ಎನ್‌ಸಿಇಆರ್‌ಟಿ ಪ್ರಶಸ್ತಿ ಮುಂತಾದವು ಸಂದಿವೆ. ದಿ. ಬಿ.ಜಿ.ಕುಸುಮಾ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಸರ್.ಸಿ.ವಿ. ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ ದತ್ತಿ ಮತ್ತು ದಿವಂಗತ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಗಮಕ ಕಾರ್ಯಕ್ರಮ ದತ್ತಿ ಎಂಬ ಎರಡು ಪ್ರತ್ಯೇಕ ದತ್ತಿಗಳನ್ನು ಸ್ಥಾಪಿಸಿರುತ್ತಾರೆ.


**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**


**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..............................................................................

..............................................................................

..............................................................................


ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೯೯೭೨೮೧೨೧೨೭